**ಮೇಲಿನಿಂದ ಕೆಳಗೆ**

| | |
|---|---|
| ಕಿಟಕಿ | ಶಿವಾಜಿ |
| ಟಗರು | ವಾಯಿಲೇ |
| ಕಿರುಬ | ಜಿಲೇಬಿ |

**ಹಿಂದು ಮುಂದು ಒಂದೆ**

ಕಮಕ, ಜಲಜ, ನಮನ, ಸರಸ, ಚಮಚ, ವಿಕಟಕವಿ, ನವಜೀವನ, ಕುಬೇರನಿಗೇನಿರಬೇಕು, ಮದ್ರಾಸಿನಸಿದ್ರಾಮ, ನಯನ, ಕಳಂಕ.

## ಚುಟುಕ(ತಮಿಳು-ಕನ್ನಡ)

### ಗಾಂಧಿ ವಂದಾರಾಂ (ತಮಿಳು)

1. ಗಾಂಧಿ ವಂದಾರಾಂ। ಬೂಂದಿ ತಿನ್ನಾರಾಂ। ಏಪಂ ಉಟ್ಟಾರಾಂ। ಎಳಚಿ ಪೋಯ್ಯಾರಾಂ।।
2. ಕಲ್ಕತ್ತಾಕ್ಕು ಪೋಗಲಾಂ। ಕಲ್ಲು ನೆಕ್ಲೇಸ್ ವಾಂಗಲಾಂ। ಕಳುತುಕ್ಕುಳ್ಳೈರ ಪೋಡಲಾಂ। ಕನ್ನಾಡಿಕುಳ್ಳೆ ಪಾರ್ಕಲಾಂ।।
3. ತಿರುಪತ್ತಿಕ್ಕಿ ಪೋಗಲಾಂ। ತಿರುಪ್ಪು ಚೊಂಬುವಾಂಗಲಾಂ। ಇಡುಪ್ಪುಕುಳ್ಳೈ ವೆಕ್ಕಲಾಂ। ತಿರಿಪ್ಪಿ ತಿರಿಪ್ಪಿ ವಕ್ಕಲಾಂ।।

### ಕನ್ನಡಾನುವಾದ

1. ಗಾಂಧಿ ಬಂದರು ಬೂಂದಿ ತಿಂದರು। ತೇಗು ಬಿಟ್ಟರು ತೆಳ್ಳಗಾದರು।।
2. ಕಲ್ಕತ್ತಾಗೆ ಹೋಗೋಣ। ಕಲ್ಲು ನೆಕ್ಲೇಸ್ ತರೋಣ।। ಕುತ್ತಿಗೆಯೊಳಗೆ ಹಾಕೋಣ। ಕನ್ನಡಿಯಲ್ಲಿ ನೋಡೋಣ।।
3. ತಿರುಪತಿಗೆ ಹೋಗೋಣ। ತಿರುವೋ ಚೊಂಬು ತರೋಣ। ನಡುವಿನಲ್ಲಿ ಇಡೋಣ ತಿರುಗಿಸಿ ತಿರುಗಿಸಿ ನೋಡೋಣ।

# ಹಾಸ್ಯಗೀತೆ

### ಅತ್ತೆವ್ವಾ ನಾ ಬಂದೀನಿ (ಸಂಭಾಷಣಾಗೀತೆ) ರಾಗ: ಶ್ರೀ

ಅಳಿಯಾ:-ಅತ್ತೆವ್ವಾ ನಾ ಬಂದೀನಿ ಅತ್ತೆವ್ವಾ। ಅತ್ತೆ:- ಬಂದಾರೆ ಬಾರ ನಿಂದಾರೆ ನಿಲ್ಲ। ನಾನಿನ್ ಅಳಿಯಾ ಅಂತಂದಿಲ್ಲ।। ಅಳಿಯಾ:- ಹಂಗಲ್ಲತ್ತೆವ್ವ ಸುಳ್ಳಿನ ಸೋಗಿನತ್ತೆವ್ವ ಈಗಿನ್ ಫ್ಯಾಶನ್ ಅತ್ತೆವ್ವ ನನ್ನ ಹೆಂಡ್ತೀನ ಕಳುಹವ್ವ।। ಅತ್ತೆ:- ಹೆಂಡ್ತಿ ಹೆಂಡ್ತಿ ಎಂದರೇನೊ ಅಳಿಯಾ ಬೆಲ್ಲದ ಹೆಂಟೆಯೇನೋ ಅಳಿಯಾ ಮಣ್ಣಿನ ಹೆಂಟೆಯೇನೋ ಅಳಿಯಾ। ಹೆಂಡ್ತಿ ಎಂದರೇನೋ।। ಅಳಿಯಾ:- ಹಂಗಲ್ಲತ್ತೆವ್ವಾ ಸುಳ್ಳಿನ್ ಸೋಗಿನತ್ತೆವ್ವ ಈಗಿನ ಫ್ಯಾಶನ್ ಅತ್ತೆವ್ವ ಎನ್ನ ಮಡದೀಯ ಕಳುಹವ್ವ।। ಅತ್ತೆ:- ಮಡದಿ ಮಡದಿ ಅಂದರೇನೊ ಅಳಿಯಾ ವೀಳೆಯ ಮಡಿ ಏನೋ ಅಳಿಯಾ ಸೊಪ್ಪಿನ ಮಡಿ ಏನೋ ಅಳಿಯಾ ಮಡದಿ ಎಂದರೇನೋ।। ಅಳಿಯಾ:- ಹಂಗಲ್ಲತ್ತೆವ್ವ ಸುಳ್ಳಿನ್ ಸೋಗಿನತ್ತೆವ್ವ ಈಗಿನ್ ಫ್ಯಾಷನ್ ಅತ್ತೆವ್ವ। ಎನ್ನ ವೈಫನ್ನು ಕಳುಹವ್ವ।। ಅತ್ತೆ :-ವೈಫು ವೈಫು ಅಂದರೇನೋ ಅಳಿಯಾ ನಲ್ಲಿಯ ಪೈಪೇನೋ ಅಳಿಯಾ ಸೇದುವ ಪೈಪೇನೋ ಅಳಿಯಾ। ವೈಫು ಎಂದರೇನೋ।। ಅಳಿಯಾ:- ಹಂಗಲ್ಲತ್ತೆವ್ವ ಸುಳ್ಳಿನ್ ಸೋಗಿನತ್ತೆವ್ವ ಈಗೀನ್ ಫ್ಯಾಷನ್ ಅತ್ತೆವ್ವ ಎನ್ನ ಪ್ಯಾರಿಯ ಕಳುಹವ್ವ।। ಅತ್ತೆ:- ಪ್ಯಾರಿ ಪ್ಯಾರಿ ಅಂದರೇನೊ ಅಳಿಯಾ ಬೀದಿಯ ಮೋರಿಯೇನೊ ಅಳಿಯ ಕತ್ತೆಯ ಮರಿಯೇನೋ ಅಳಿಯ ಪ್ಯಾರಿ ಎಂದರೇನೋ।। ಅಳಿಯಾ: ಕರ್ಮ ಕರ್ಮ ಇವ್ರು ಕಳ್ಸೋಲ್ಲ ನಾನ್

ಕರ್‍ಕೊಂಡ್ಹೋಗಲ್ಲ॥

**ಅತ್ತೆಯು ಬಂದಳು ಅಳಿಯನ ಮನೆಗೇ** **ರಾಗ:ಕಲಾವತಿ**

ಅತ್ತೆಯು ಬಂದಳು ಅಳಿಯನ ಮನೆಗೇ ಸಂಜೆಯಾಗಿತ್ತು। ವಸಂತ ಋತುವಿನ ಸುಂದರ ಚೆಲುವೂ ಮೋಡವ ಕರೆದಿತ್ತೂ। ಕಪ್ಪನೆ ಮೋಡವ ಕರೆದಿತ್ತೂ॥1॥ ಆಗಲೆ ಮನೆಯಲಿ ಮೆಲ್ಲನೆ ಮಾತಿನ ಸುರಿಮಳೆ ಸುರಿದಿದ್ದೂ। ತಾಯಿಗೂ ಮಗಳಿಗೂ ಯೋಗಕ್ಷೇಮದ ವಿಚಾರ ನಡೆದಿತ್ತೂ। ಒಳಗಡೆ ಪಿಸುಪಿಸ ದನಿ ಇತ್ತು॥2॥ ಚಿಂದುಳ್ಳಿ ಚೆಲುವೆಯೆ ಹಿಗೇಕೆ ಸೊರಗಿದೆ ತಾಯಿಯ ಹೃದಯವು ಕರಗಿತ್ತೂ। ತಾಯಿಯ ಮಮತೆಯ ಒಬ್ಬಳೆ ಮಗಳಿಗೆ ಕಣ್ಣಲಿ ನೀರು ಹರಿದಿದ್ದೂ। ಪ್ರೀತಿಯ ಹೊನಲು ಉಕ್ಕಿತ್ತೂ॥3॥ ಹೊರಗಡೆ ಅಳಿಯನು ಒಬ್ಬನೇ ಇರಲೂ ಮುಜುಗರವಾಗಿತ್ತೂ। ಹೆಂಡತಿ ಜತೆಯಲಿ ಲಲ್ಲೆಯ ಹೊಡೆಯಲು ಮನಸ್ಸು ಕಾದಿತ್ತೂ। ಹೊರಗಡೆ ಕತ್ತಲು ಕವಿದಿತ್ತೂ॥4॥ ಅಪ್ಪಟ ಹತ್ತಿಯ ಹಾಸಿಗೆ ಮೇಗಡೆ ದುಪ್ಪಟಿ ಬಿದ್ದಿತ್ತೂ। ಗೊಣಗುತ ಅಳಿಯನು ದಿಂಬನು ಒರಗಲು ನಿದ್ದೆಯು ಬರದಾಯ್ತು। ಅತ್ತೆಗೆ ಶಾಪವ ಹಾಕಾಯ್ತೂ॥5॥ ಮರುದಿನ ಅತ್ತೆಯ ಪಯಣದ ಸುದ್ದಿಯು ಕಿವಿಗಳಿಗಿಂಪಾಯ್ತೂ। ಅಳಿಯನ ಪಾಲಿಗೆ ಅಮೃತವ ಸವಿದಂತೆ ಮನಸ್ಸು ಕುಣಿದಿತ್ತೂ। ಮಲ್ಲಿಗೆ ಹೂವೂ ಬಿರಿದಿತ್ತು (ಅರಳಿತ್ತೂ)॥6॥

**ಅಯ್ಯಯ್ಯಪ್ಪ ಜನಗಳು**

ಅಯ್ಯಯ್ಯಪ್ಪ ಜನಗಳು ಒಳ್ಳೆದಕ್ಕು ಕೆಟ್ಟದಕ್ಕು ಏನೇನೋ ಅಂತಾರೆ ಆಡ್ತಾರೆ ಬಯ್ತಾರೆ ಈ ಜನಗಳ್॥ಪ॥ ಮೈತುಂಬಾ ಬಟ್ಟೆ ತೊಟ್ಟು ಹಣೆಗಗಲ ಕುಂಕುಮ ಇಟ್ಟರೆ ಗೌರಮ್ಮ ಅಂತಾರೆ। ಲಂಗ ಲುಂಗಿ ಚಡ್ಡಿ ತೊಟ್ಟರೆ ಫ್ಯಾಷನ್ ಹುಡುಗಿ ಅಂತಾರೆ॥1॥ ಮಾತಿಗೆ ಮಾತು ಜವಾಬು ಕೊಟ್ಟರೆ ಬಜಾರಿ ಅಂತಾರೆ। ಮಾತನಾಡದೆ ಸುಮ್ಮನೆ ಇದ್ದರೆ ಮಳ್ಳಿ ನೋಡು ಅಂತಾರೆ॥2॥ ಚಡ್ಡಿ ಶರ್ಟ್ ಟವಲ್ ಇದ್ದರೆ ಹಳ್ಳಿಗೌಡ ಅಂತಾರೆ। ಹ್ಯಾಟ್ ಬೂಟ್ ಸೂಟ್ ತೊಟ್ಟರೆ ಬಲು ಗರ್ವ ಅಂತಾರೆ॥3॥ ಉಂಗುರ ವಾಚು ಚೈನು ಇದ್ದರೆ ತಾತನ ಸ್ವತ್ತು ಅಂತಾರೆ। ಏನೂ ಇಲ್ಲದೆ ಹಾಗೆ ಇದ್ದರೆ ಗರೀಬ ಅಂತಾರೆ॥4॥ ಮೈ ಕೈ ತುಂಬಿಕೊಂಡು ಚೆನ್ನಾಗಿದ್ದರೆ ಧಡಿಯಾನೋಡು ಅಂತಾರೆ। ಹಾಗೇ ತೀರ ಸಣ್ಣಕ್ಕಿದ್ದರೆ ಕಡ್ಡಿ ಪೈಲ್ವಾನ್ ಅಂತಾರೆ॥5॥ ಮನೆ ಆಸ್ತಿ ಜೋರಾಗಿದ್ದರೆ ಬ್ಲಾಕ್ ಮಾರ್ಕೆಟ್ ಅಂತಾರೆ। ಲಂಚ ಕೊಟ್ಟು ಅವರೆ ನಮ್ಮನ್ ಲಂಚಕೋರ ಅಂತಾರೆ॥6॥

**ಅಳಿಯ2 ನನ್ನಳಿಯ** **ರಾಗ: ಶಂಕರಾಭರಣ**

ಅಳಿಯ ಅಳಿಯ ನನ್ನಳಿಯ ನೀ ಯಾವಾಗ್ಬಂದೆ ನನ್ನಳಿಯ ಸೋದ್ರಳಿಯ। ಸ್ಕೂಟ್ರಲಿ ಬಂದೆಯಾ ನನ್ನಳಿಯ। ನೀ ಕಾರ್‍ನಲ್ಲಿ ಬಂದೆಯಾ ನನ್ನಳಿಯ। ಸ್ಕೂಟ್ರಲ್ಲಿಲ್ಲ ಕಾರ್‍ನಲ್ಲಿಲ್ಲ, ಕಾರ್‍ನಲಿಲ್ಲ, ಸ್ಕೂಟ್ರಲಿಲ್ಲ, ನಡ್ಕೊಂಡ್ ಬಂದೆ ಕಾಣತ್ತೆ। ಅತ್ತೆ ಅತ್ತೆ ನನ್ನತ್ತೆ, ನನ್ನ ದಡ್ಡ ಅಂತಾರತ್ತೆ। ನಾಯಾವ್ದ್ರಲ್ಲಿ ಕಮ್ಮಿ ಹೇಳತ್ತೆ॥1॥ ತಣ್ಣೀರು ಬೇಕೊ ನನ್ನಳಿಯ ನಿಂಗ್ ಬಿಸಿನೀರು ಬೇಕೊ ನನ್ನಳಿಯ। ತಣ್ಣೀರು ಬೇಡ ಬಿಸಿನೀರು ಬೇಡ, ಬಿಸಿ ನೀರು ಬೇಡ ತಣ್ಣೀರು ಬೇಡ ಗಂಜಲಇದ್ರೆ ಉಯ್ಯತ್ತೆ॥2॥ ಸ್ನೋ ಬೇಕೊ ನನ್ನಳಿಯ ನಿಂಗೆ ಪೌಡರ್ ಬೇಕೊ ನನ್ನಳಿಯ। ಸ್ನೋ ಬೇಡ ಪೌಡರ್ ಬೇಡ, ಪೌಡರ್ ಬೇಡ ಸ್ನೋನೂ ಬೇಡ ಸಗಣಿ ಇದ್ದರೆ ಕೊಡತ್ತೆ॥3॥ ಹಾಲು ಕುಡಿಯೋ ನನ್ನಳಿಯ ನೀ ಹಾರ್ಲಿಕ್ಸ್ ಕುಡಿಯೋ ನನ್ನಳಿಯ। ಹಾಲು ಬೇಡ ಹಾರ್ಲಿಕ್ಸ್ ಬೇಡ, ಹಾರ್ಲಿಕ್ಸ್ ಬೇಡ, ಹಾಲೂ ಬೇಡ, ಗಂಜಿದ್ರೆ ಕೊಡತ್ತೆ॥4॥ ಪಂಚೆ ಬೇಕೊ ನನ್ನಳಿಯ ನಿಂಗೆ ಲುಂಗಿ ಬೇಕೊ ನನ್ನಳಿಯ॥ ಪಂಚೆಯು ಬೇಡ ಲುಂಗಿಯು ಬೇಡ, ಲುಂಗಿಯು ಬೇಡ ಪಂಚೆಯು ಬೇಡ, ಗೋಣಿಚೀಲ ಸಾಕತ್ತೆ॥5॥ ಚಾಪೆ ಹಾಸಲೋ ನನ್ನಳಿಯ। ನಿಂಗೆ ಹಾಸಿಗೆ ಹಾಸಲೋ ನನ್ನಳಿಯ। ಚಾಪೆಯು ಬೇಡ, ಹಾಸಿಗೆ ಬೇಡ, ಹಾಸಿಗೆ ಬೇಡ ಚಾಪೆಯು ಬೇಡ ಗೋಣಿಚೀಲ ಹಾಸತ್ತೆ॥6॥ ನಡುವೇಲಿ ಮಲಗೀಯೊ ನನ್ನಳಿಯ ರೂಮಲಿ ಮಲಗೀಯೊ ನನ್ನಳಿಯ॥ ನಡ್ವೇಲಿ ಬೇಡ ರೂಮೂ ಬೇಡ, ರೂಮೂ ಬೇಡ, ನಡುವೆಯೂ ಬೇಡ, ಕೊಟ್ಟಿಗೇಲಿ ಮಲಗ್ತೀನಿ ಕಾಣತ್ತೆ॥7॥ ದೊಡ್ಡಮಗ್ಳು ಬೇಕೊ ನನ್ನಳಿಯ ನಿಂಗೆ ಚಿಕ್ಕಮಗ್ಳು ಬೇಕೋ ನನ್ನಳಿಯ।

ದೊಡ್ಡಮಗ್ಳು ಬೇಡ ಚಿಕ್ಕಮಗ್ಳು ಬೇಡ ಚಿಕ್ಕಮಗ್ಳು ಬೇಡ ದೊಡ್ಡಮಗ್ಳು ಬೇಡ ನೀನೇ ಬೇಕು ಕಾಣತ್ತೆ॥8॥ ಅಳಿಯ ಅಳಿಯ ನನ್ನಳಿಯ। ನಿನ್ನ ಮೆಟ್ನಾಗೆ ಹೊಡಿತೀನಿ ನನ್ನಳಿಯ॥ ತಪ್ಪಾಯ್ತು ತಪ್ಪಾಯ್ತು ನನ್ನತ್ತೆ! ನಾ ತೆಪ್ನೂರ್ಗೆ ಹೋಗ್ತೀನಿ ನನ್ನತ್ತೆ॥9॥

### ಆಚೆ ಮನೆ ಸುಬ್ಬಮ್ನೋರ್ಗೆ

ಆಚೆ ಮನೆ ಸುಬ್ಬಮ್ನೋರ್ಗೆ ಏಕಾದಶಿ ಉಪವಾಸ। ಎಲ್ಲೋ ಸ್ವಲ್ಪ ತಿಂತಾರಷ್ಟೇ ಉಪ್ಪಿಟ್ಟು ಅವಲಕ್ಕಿ ಪಾಯಸ॥1॥ ಮೂರೊ ನಾಲ್ಕೋ ಬಾಳೇಹಣ್ಣು ಸ್ವಲ್ಪ ಚಕ್ಕುಲಿ ಕೋಡುಬಳೆ। ಗಂಟೆಗೆ ಎರಡೆರಡು ಸೀಬೆಹಣ್ಣು ಆಗಾಗ ಒಂದೊಂದು ಕಿತ್ತಲೆಹಣ್ಣು॥2॥ ಮಧ್ಯಾನ್ನಕ್ಕೆಲ್ಲೋ ರವೇಉಂಡೆ ಹುರುಳೀಕಾಳಿನ ಉಸ್ಲಿ। ಎಲ್ಲೋ ಸ್ವಲ್ಪ ಬಿಸಿ ಸಂಡಿಗೆ ಐದೋ ಆರೋ ಇಡ್ಲಿ॥3॥ ರಾತ್ರಿ ಪಾಪ ಉಪ್ಪಿಟ್ಟೇಗತಿ ಒಂದ್ಲೋಟದ್ ತುಂಬ ಹಾಲು ಪಕ್ಕದ ಮನೆಯ ಕೆಂಪೇಗೌಡರ ಸೀಮೆ ಹಸುವಿನ ಹಾಲು॥4॥

### ಇನ್ನೂ ಯಾಕ ಬರಲಿಲ್ಲಾಕೀ

ಇನ್ನೂ ಯಾಕ ಬರಲಿಲ್ಲಾಕೀ। ನೆನ್ನೇ ಹೋದಾಕೀ। ಪ್ರತಿದಿನಾ ಇಷ್ಟೊತ್ತಿನೊಳು। ಬರುವಂಥಾಕೀ॥ ಫಸ್ಟ್ ಬೆಲ್ ಆಗೋದಕ್ಕಿಂತಾ ಮುಂಚೆ ಬರುವಾಕೀ। ಗರ್ಲ್ಸ್ ರೂಮಿನಲ್ಲಿ ಕುಳಿತು ಹಣುಕಿ ಹಾಕ್ಯಾಕೀ॥ ಎಂದಾದರೊಮ್ಮೆ ತಡಮಾಡಿ ಬಂದರೆ ಕೂಡಲೆ ಕೇಳಾಕೀ ।ಇಂದೇಕೆ ಇಷ್ಟೊಂದು ತಡವಾಯಿತು ಬರಲಿಕ್ಕೆ ಎನುವಾಕೀ॥ ದಿನೇ ದಿನೇ ನೋಡಿ ನೋಡಿ ನಗಿಸುವಂಥಾಕೀ। ಹನ್ನೊಂದು ಆದರೂ ಇನ್ನೂ ಬರಲಿಲ್ಲ ನೆನ್ನೆ ಹೋದಾಕೀ॥ ಚಿಂತಿಸಿ ಕೊಂಡು ಕುಳಿತೆ ನಾನು ಶಾಲೆಯ ಬಯಲಲ್ಲಿ! ಅಷ್ಟರೊಳಗೆ ಹೊಡೆದೇ ಬಿಟ್ಟಿತು। ಫಸ್ಟ್ ಬೆಲ್ಲು॥ ಇನ್ನೇನು ಮಾಡುವದೆಂದು ಹೊರಟೆ ಕ್ಲಾಸಿನಾ ಕಡೆಗೇ। ಎದುರಿಗೆ ಬಂದ ಅವಳ ಸಖಿಯ ಕೇಳಿದ ಕೂಡಲೇ। ಕೇಳಿದೊಡನೆ ನಿಂತಳು ನಿಮಿಷ। ಮೌನದಲ್ಲೇ ನಂತರ ಹೇಳಿ ಹೊರಟಳು ಅವಳಿಗೆ। ಖಾಯಿಲೆ ಎಂದೂ॥ ಕೇಳಿದೊಡನೆ ಮನಸ್ಸು ಕರಗಿಹೋಯಿಕು ಕ್ಷಣದಲ್ಲಿ। ಕೂಡಲೆ ವಾಪಸ್ ಹೊರಟೆ ಅಲ್ಲಿಂದ ಕ್ಲಾಸಿಗೇ ಹೋಗದೇ॥ ಇನ್ನೂ ಯಾಕೆ ಬರಲಿಲ್ಲಾಕಿ ನೆನ್ನೆ ಹೋದಾಕಿ। ಸೆಕೆಂಡ್ ಬೆಲ್ಲು ಆದರೂ ಸಹಿತ ಬರಲಿಲ್ಲ ನೆನ್ನೆ ಹೋದಾಕೀ॥

### ಇಬ್ಬರ ಹೆಂಡಿರ ಕಾಟ

ಇಬ್ಬರ ಹೆಂಡಿರ ಕಾಟ ಸಾಕಾಯ್ತೀ ಜಂಜಾಟ। ಒಂದಕ್ಕಿದ್ದರೆ ಮತ್ತೊಂದಕ್ಕಿಲ್ಲ ಬಲು ಗೋಳಾಟ ಈ ಹೆಂಡಿರ ಕಾಟ॥ಪ॥ ಒಬ್ಬಳು ಕೇಳ್ತಾಳೆ ವಾಲಿ। ಮತ್ತೊಬ್ಬಳು ಕೇಳ್ತಾಳೆ ಮಾಲಿ ಕೊಡಿಸೋಣೆಂದರೆ ಕಾಸೇ ಇಲ್ಲ ಎರಡೂ ಕೈಗಳು ಖಾಲಿ॥1॥ ಒಬ್ಬಳು ಕೇಳ್ತಾಳೆ ನತ್ತು। ಮತ್ತೊಬ್ಬಳು ಕೇಳ್ತಾಳೆ ಮುತ್ತು॥ ಕೊಡಿಸೋಣೆಂದರೆ ಕಾಸೇಇಲ್ಲ। ಆಗಿದೆ ನನಗೆ ಸುಸ್ತು॥2॥ ಒಬ್ಬಳು ಕೇಳ್ತಾಳೆ ಸಾಡಿ। ಮತ್ತೊಬ್ಬಳು ಕೇಳ್ತಾಳೆ ಬಾಡಿ। ಕೊಡಿಸೋಣೆಂದರೆ ಕಾಸೇಇಲ್ಲ ನಿಲ್ಲಲಿದೆ ನನ್ನ ನಾಡಿ॥3॥ ಒಬ್ಬಳು ಕೇಳ್ತಾಳೆ ನೆಕ್‌ಲೇಸ್। ಮತ್ತೊಬ್ಬಳು ಕೇಳ್ತಾಳೆ ಬ್ಯಾಂಗಲ್ಸ್। ಕೊಡಿಸೋಣೆಂದರೆ ಕಾಸೇ ಇಲ್ಲ ಆಗುವೆನೀಗ ಡಿಸ್ ಮಿಸ್॥4॥ ಹೇಳ ಹೇಳ ಹೇಳ ಏನು ಮಾಡಲಿ ಹೇಳ। ನಿಮ್ಮಿಬ್ಬರ ಕಟ್ಟಿಕೊಂಡು। ಎಲ್ಲಿಗೆ ಹೋಗಲಿ ಹೇಳ॥5॥ ಎಲ್ಲಿಗೆ ಹೋಗಲಿ ಯಾರನು ಕೇಳಲಿ। ಬಣ್ಣದ ಬಾಳಿದು ಸಾಕು। ಬಲು ಗೋಳಾಟ। ಈ ಹೆಂಡಿರ ಕಾಟ॥5॥

### ಈಗಿನ ಕಾಲದ ವಧುಗಳು (ಲಾವಣಿ) — ರಾಗ:ಮುಖಾರಿ

ಈಗಿನ ಕಾಲದ ವಧುಗಳು ನಡೆಯುವ ರೀತಿ ನೀತಿಗಳ್ ನೀವ್ಕೇಳಿ॥ಪ॥ ತಲೆಗೆ ಬೇಕು ಬ್ರೋಚ್ಚೇರ್ ಪಿನ್ನೂ। ಜಡೆಗೆ ಬೇಕೂ ಸ್ಯಾಟಿನ್ ರಿಬ್ಬನ್। ಕಿವಿಗೆ ಬೇಕು ಉದ್ದನೆ ಲೋಲಾಕ್ ಮುಖಕ್ಕೆ ಬೇಕು ಸ್ನೋಪೌಡರ್॥1॥ ಮೈಗೆ ಬೇಕು ಟ್ರಾನ್ಸ್‌ಪರೆಂಟ್ ಸ್ಯಾರೀ। ಕಾಲಿಗೆ ಬೇಕು ಹೈ ಹೀಲ್ಡ್ ಷೂ। ಕೈಗೆ ಬೇಕು ಲೇಡಿಸ್ ಪರ್ಸು ತುಟಿಗಳಿಗ್ ಲಿಪ್‌ಸ್ಟಿಕ್ ಸರ್ವರ್ತಿರಬೇಕು॥2॥ ಕೈಗೆ ಬೇಕು ಸಣ್ಣನೆ ವಾಚೂ। ಮೋಟಾರ್ ಹತ್ತಿ ಅಲಿಬೇಕೂ। ಬಡವನೆ ನಾನು ಅಸಾಧ್ಯವೆಂದರೆ।

ಬಿಟ್ಹೋಗುವೆನೂ ಎನ್ನುವರೂ।।3।। ಪಿಚ್ಚರ್ಸ್‌ಗ್ಹೋಗಿ ಮಾರ್ಕೆಟ್ ತಿರುಗಿ ಬ್ಯಾಂಗಲ್ಸ್ ಫ್ಲವರ್ಸ್ ಫ್ರೂಟ್ಸ್ ತರಬೇಕು। ತರಬೇಕಾದರೆ ಆಗುವ ಖರ್ಚನು ನೀವ್ ಕೊಡಬೇಕು।।4।। ಬಿಎಸ್ಸಿ ಪಾಸನು ಮಾಡಿದ್ದೇನೆ ತಂದಿಡಿ ನಾವಲ್ಸ್ ಓದಬೇಕು। ಓದಬೇಕಾದರೆ ಗೀತಾರಾಮಾಯಣವಿದೆ। ನಮಗಿದು ಒಂದೂ ಬೇಕಿಲ್ಲಾ। ಅಡಿಗೆ ಕೆಲಸಕು ಮನೆಯ ಕೆಲಸಕು ಸರ್ವೆಂಟ್ಸ್ ಇಬ್ಬರ ಮರೆಯಬೇಡೀ।।5।।

## ಈಗಿನ ಕಾಲದ ವರಗಳು (ಲಾವಣಿ)

ಈಗಿನ ಕಾಲದ ವರಗಳು ಕೇಳ್ವ ವಿಚಾರವ ಕೇಳಿರಿ ಜನರೆಲ್ಲಾ।।ಪ।। ತಲೆಗೆ ಬೇಕು ಕೌಂಡನ ಹ್ಯಾಟ್, ಕಾಲಿಗೆ ಬೇಕು ಸೊಗಸಿನ ಬೂಟ್ಸು। ಮಯ್ಯಿಗೆ ಬೇಕು ಸುಂದರ ಸೂಟು, ಕೈಯಿಗೆ ಬೇಕು ಟೆನ್ನೀಸ್ ಬ್ಯಾಟ್।। ಕಣ್ಣಿಗೆ ಬೇಕು ಕೂಲಿಂಗ್ ಗ್ಲಾಸ್, ಕೊರಳಿಗೆ ಬೇಕು ಕಂಠಿಹಾ।।1।। ಮೋಟಾರ್ ಸೈಕಲ್, ಬೆಳ್ಳಿಯ ಸಾಮಾನ್, ವರದಕ್ಷಿಣೆಗಳು ಎಷ್ಟೋಳ್ರೀ। ಎಂಟ್ರೆನ್ಸ್ ಬಿಎಲ್ ಎಂಎಲ್ ತನಕ ಓದಿನ ಖರ್ಚನು ವಹಿಸಿಕೊಳ್ರೀ।।2।। ಮಗಳಿಗೆ ಮನೆ ಹೊಲ ಗದ್ದೆಗಳೆಲ್ಲವ ಮೊದಲೆ ರಿಜಿಸ್ಟರ್ ಮಾಡಿಸಬೇಕು। ಲಂಡನ್ ಇಂಗ್ಲೆಂಡ್ ಐರ್ಲೆಂಡ್ ಸ್ಕಾಟ್ಲೆಂಡ್ ಅಮೆರಿಕಕ್ಹೋಗಿ ಬರಬೇಕು। ಮದುವೆಗೆ ಬರುವ ಜನಗಳಿಗೆಲ್ಲ ರೈಲ್‌ಚಾರ್ಜ್‌ನ್ನು ಕಳುಹಿಸಿರಿ। ।3।। ಮಗಳಿಗೆ ಕಟ್ಟಲು ಮಾಂಗಲ್ಯ ಒಡವೆ ಸೀರೆಗಳ್ ತೆಗೆದಿರಿಸಿ। ಮೊದಲೆ ಹೊರಡಲು ರಜವಿಲ್ಲ ವರನಿಗೆ ಪ್ಲೈನ್ ಟಿಕೇಟ್ ಕಳುಹಿಸಿರಿ। ಉಟೋಪಚಾರ ಫಲತಾಂಬೂಲವ ಧಾರಳವಾಗಿಗೆಳೆಯರಿಗ್ ನೀಡಿ।।4।।

## ಈ ಪರಿಯ ಕೊರಗಾವ ರಾಗ: ಅಠಾಣ

ಈ ಪರಿಯ ಕೊರಗಾವ ದೇಶದಲು ನಾಕಾಣೆ। ಏಕೋಪಿಸಿದ ಈ ಕನ್ನಾಡಲಲ್ಲದೆ।।ಪ।। ದೊರೆಯ ತನದಲಿ ನೋಡೆ ಧರಣಿ ರಮಣರ ಗಡಣ। ಸಿರಿಯ ತನದಲಿ ನೋಡೆ ಸ್ವರ್ಣಭೂಮಿ।ಹಿರಿಯ ತನದಲಿ ನೋಡೆ ಗೊಮ್ಮಟೇಶ್ವರಯ್ಯಾ। ಗುರುತನದಲೀಕ್ಷಿಸಲು ನೂರಾರು ಮಠವು।।1।। ಪಾವನತೆಯಲಿ ನೋಡೆ ಕೃಷ್ಣ ತುಂಗಾ ಜಲಂ। ಸೇವತ್ವದಲಿ ನೋಡೆ ಬಿಳಿಯರೊಡವೆ। ಲಾವಣ್ಯದಲಿ ನೋಡೆ ಜೋಗಮೋಹನ ಪತನ। ಆವ ಧೈರ್ಯದಿ ನೋಡೆ ಹರ್ಷಾಂತಕ।।2।। ಗಗನದಲಿ ಗೋಚರಿಪ ಗಂಟ ಬೇಗನೆ ತಂದು ಜಗದಿ ಹಂಚುವ ಪರಿಯೆ ಹಿರಿಯಾಸೆಯು। ಭರತದೇಶದಿ ನಮ್ಮ ಕನ್ನಾಡಿಗಲ್ಲದೆ ಮಿಗಿಲಾದ ಭಾಗಗಳಿಗೀ ಭಾಗ್ಯವುಂಟೆ?।।

## ಉಪ್ಪಿನಕಾಯಿ ಹಾಡು ಕೇಳಿ ರಾಗ: ಮೋಹನ

ಉಪ್ಪಿನಕಾಯಿ ಹಾಡು ಕೇಳಿ ಬಹು ರುಚಿ। ಸ್ವಲ್ಪ ನೀವು ತಿಂದು ನೋಡಿ ಅದರ ರುಚಿ।।ಪ।। ಮಾವಿನ ಕಾಯಿ ಅಮ್ಟೆಕಾಯಿ ನಿಂಬೆಕಾಯಿ। ಹೋಳು ಹೆಚ್ಚಿ ಹಾಕಬೇಕ್ರಿ ಉಪ್ಪಿನ್ಕಾಯಿ।।1।। ಬಾಯಿ ಕಟ್ಟಿ ಬೆಚ್ಚಗದ ಇಡಬೇಕ್ರಿ। ರಸಾ ಬಿಟ್ಟ ಉಪ್ಪಿನ ಕಾಯಿ ತೆಗೆಯ ಬೇಕ್ರಿ। ಹಸನಾದ ಮೊಸರು ಹಾಕಿ ಹೊಡೆಯಬೇಕ್ರಿ।।2।।

## ಊಟಸಾಗಲಿ ಮುಂದೆ ಹೋಗಲಿ ರಾಗ:ಮೋಹನ

ಊಟಸಾಗಲಿ ಮುಂದೆ ಹೋಗಲಿ। ಡೊಳ್ಳು ಹೊಟ್ಟೆಯ ತುಂಬಿರೀ। ಬೀಸುಗಾಳಿಗೆ ಬೀಳುತೇಲುತ ತೇಗು ಮೇಲ್ಗಡೆ ಹಾರಲೀ।।ಪ।। ತಾಮ್ರಗಿಂಡಿಯ ಹಿಡಿದು ಕೈಯೊಳು ಪಾನವಾರಿಯ ಚುಮುಕಿಸೀ। ಅನ್ನರಾಶಿಗೆ ಇರುವೆ ಬಾರದೆ, ಎಲೆಯ ಸುತ್ತ ಪರಿಚಿಸೀ।।1।। ನೋಡಿ ಬಾಳೆಲೆ ತುದಿಯ ಮುಂಗಡೆ ಭಕ್ಷ್ಯ ಭೋಜನ, ವೈಖರೀ। ರಂಜಿಸುತ್ತಿದೆ ಚೆಲುವು ಯಾತಕೆ। ನಿತ್ಯ ತಿನ್ನಲು ಬಯಸಿರೀ ನಿತ್ಯ ತಿನ್ನಲು ಬಯಸಿರೀ।।2।। ಕರಿದ ಶಾವಿಗೆ ಪಾಯಸಂಗಳು। ಹಿಮಗಳಂದದಿ ಘೃತಮಣಿ। ಮಿಂಚುತಿರ್ಪುದು ನಡುವೇಯೇತರ ದ್ರಾಕ್ಷಿ ಕೇಸರಿ ರವೆಮಣೀ।।3।। ದೂರಬೆಟ್ಟದ ಮೇಲೆ ಮೆಯ್ಯುವ ಬಿಳಿಯ ಗೂಳಿಯ ನೋಡಿರೀ। ಅದನೇ ಹೋಲುವ ಅಂತೆ ತೇಗುವ ಮದುವೆಯೂಟವ ಮಾಡಿರೀ। ಮದುವೆಯೂಟವ ಮಾಡಿರೀ।।4।। ನಾವು ಲೀಲಾ ಮಾತ್ರಜೀವರು ನಮ್ಮ ಜೀವನ ಲೀಲೆಯು। ಇಂದು ಇಂದಿಗೆ ನೆನ್ನೆ ನೆನ್ನೆಗೆ ಇರಲಿ ನಾಳೆ ನಾಳೆಗೆ।।5।।

**ಎಂಥದ್ದೋ ಕಾಫಿಯ ಮಹಿಮೇ** **ರಾಗ:ಮಾಂಡ್-ಏಕತಾಳ**

ಎಂಥದ್ದೋ ಕಾಫಿಯ ಮಹಿಮೇ॥ಪ॥ ಎಂಥದ್ದೋ ಕಾಫಿಯ ಮಹಿಮೇ। ಅದರಂತರಗಂದ ಶುದ್ಧಿ ಹಿರಿಮೇ। ಆಹಾ ಅಂತಿಂಥ ಜನರೆಂಬೊ ಪಂಥವ ಹಿಡಿಯದೇ ಸತತ ಸೇವಿಸಲತ್ಯಂತ ಸುಖಕರಾ॥1॥ ಮದುವೇಲಿದಕೆ ಮುಖ್ಯ ಸ್ಥಾನಾ। ಜನರಿದಕಾಗಿ ಬಿಡುವೋರು ಪ್ರಾಣಾ। ನಿದ್ರಾ ರಕ್ಕಸನಿಗೆ ರಾಮಬಾಣ। ಹೊಟ್ಟೆಗಿಲ್ಲಾದಿದ್ರೂ ಅಟ್ಟಹಾಸದಿಂದಾ ತೊಟ್ಟು ಕಂಕಣ ಲಜ್ಜೆ ಬಿಟ್ಟು ಬಳಸುವ ನೀರು॥2॥ ಬಹು ಮೂತ್ರಕಾರಕರೂಪ। ಜನಕೆ ಅಹುದೆಂದರೆ ಬಲುಕೋಪ। ಸ್ವಲ್ಪ ತಡವಾದರೆ ತಲೆನೋವಿನ ತಾಪ। ಮಲಬದ್ಧವಾದರೂ ಸುಲಲಿತದಿಂ ಕುಡಿವೋ। ಕಲುಮಶದಿಂದೊಡಗೂಡಿದ ಪಾನೀಯ॥3॥ ಬಾಬಾಬುಡನ ತಪಸಿದ್ದೀ ಎಂಬೋ ಗಿರಿಕಾಫೀ ಲೋಕಪ್ರಸಿದ್ಧಿ। ನೀಡ್ ತೊರೆಗೊಳ್ಳಿ ಸುಮ್ಮನೇಕಿದ್ದೀ। ಹರಿಹರ ಬ್ರಹ್ಮರ ವರವೆಂದು ಭಾವಿಸಿ। ನಿರುತದಿ ಸೇವಿಸು ಪರಮ ಪಾವನತರ॥4॥ ಸೊಳ ಸೊಳ ಮರಳುವ ಅಂಬು। ಅದಕೆ ಅಳುಕದೆ ಹಿಡಿ ಚೂರ್ಣವ ತುಂಬು। ಕೊನೆಗುಳಿವೋ ಓಕುಳಿ ಬಹು ಇಂಬು। ಒಳಿತಾದ ಸಕ್ಕರೆ ಎಮ್ಮೆ ಹಾಲು ಸೇರಿಸಿ। ಗಳಪೂರ್ತಿ ಸೇವಿಸೆ ಸೆಳೆ ಸ್ವರ್ಗ ಸುಖದಿಂದ॥5॥

**ಎನ್ನಾ ಮುದ್ದು ಕುದುರೆ**

ಎನ್ನಾ ಮುದ್ದು ಕುದುರೆ ಎಲ್ಲಿ ವೆಂಕು ಬಾಯಿ ಹುಡುಕೆಲೆ॥ ಎನ್ನ ಮುದ್ದು ಕುದುರೆ ಎಲ್ಲಿ ಗೋಪಾಲಸ್ವಾಮಿ ಹುಡುಕೆಲೊ॥1॥ ಒಂದು ಕಣ್ಣು ಕುರುಡು ಅದಕೆ ಒಂದು ಕಾಲು ಕುಂಟೆಲೋ। ಎಲ್ಲರಿಗದರ ಮೇಲೆ ಕಣ್ಣು। ನೀವೆ ಹೋಗಿ ಹುಡುಕಿರೋ॥2॥ ಹುರುಳಿಯಾದರೂ ಆರು ಸೇರು। ಜೊತೆಗೆ ಕಡಲೆ ಎರಡು ಸೇರು। ಎರಡು ಹೊರೆ ಹಸಿ ಹುಲ್ಲು। ಮೆಲ್ಲುತಿದ್ದ ಮುದ್ದು ಕುದುರೆ॥3॥ ಅಪ್ಪಂಭಟ್ರು ತಿಪ್ಪಾಚಾರ್ರು। ಕುಪ್ಪಣ್ಣೈಯ್ಯಂಗಾರ್ಯರು। ಎಲ್ಲರಿಗದರ ಮೇಲೆ ಕಣ್ಣು ಬೇಗಹೋಗಿ ಹುಡುಕಿರೋ॥4॥

**ಎಮ್ಮ ಮನೆ ತಂಗಳಲಿ** **ರಾಗ: ಭೂಪಾಳಿ**

ಎಮ್ಮ ಮನೆ ತಂಗಳಲಿ ಬೆಳದೊಂದ ಹೈದನ್ನ। ನಿಮ್ಮ ದೊಡ್ಡಿಯೊಳಿಡಲು ತಂದಿರುವೆವು। ।ಪ॥ ಕೊಳ್ಳೀರೀ ಮೃಗವನ್ನು ಎಮ್ಮ ಮನೆಯ ತೋಳವನು। ನಿಮ್ಮ ಮನೆಯನು ತೊಳೆಯಲೊಪ್ಪಿಸುವೆವು॥1॥ ಮರಕೋತಿ ಆಟಗಳ ಅರಿಯನಿವನು। ಹಳಸು ದೋಸೆಗಳ ತಿಂದರಿಯನು॥ ಮೇಸ್ತ್ರುಗಳ ನೋಯಿಸದೆ ಶಾಲೆಯನು ಬಿಟ್ಟವನು॥2॥ ಸಲಹಿಕೊಳ್ಳಿರೀ ಸಲಗವನೊಪ್ಪಿಸುವೆವು॥2॥ ನಿಮಗಿವನು ಮಾಡುತಿಹ ಮೇಲು ಖರ್ಚುಗಳ ಸವಿ। ಎಂದೆಂದು ಕೋಣನವನ ಶೋಕಿಗಳಿಗಾಗಿ॥3॥

**ಎಷ್ಟೆಷ್ಟೇ ತಿನ್ನಲಿ ಈ ಹೊಟ್ಟೆ** **ರಾಗ: ಖರಹರಪ್ರಿಯ**

ಎಷ್ಟೆಷ್ಟೇ ತಿನ್ನಲಿ ಈ ಹೊಟ್ಟೆ ತುಂಬದು। ಇದನಂತೂ ತುಂಬಿಸಲು ಬ್ರಹ್ಮ ನಿಂದಲುಸಾಧ್ಯವಾಗದು॥ಪ॥ ಇಡ್ಲಿ, ದೋಸೆ, ವಡೆಗಳ ಡಜನ್ ಗಟ್ಲೆ ತಿಂದನು। ಕೇಸ್ರೀಭಾತು ಖಾರಭಾತು ಪ್ಲೇಟ್ ಗಟ್ಲೆ ತಿಂದೆನು। ಬಗೆಬಗೆಯ ಸಿಹಿತಿಂಡಿ ಬಿಡುವಿಲ್ದೆ ತಿಂದೆನು। ಹಣ್ಣು ಹಂಪಲೆಲ್ಲ ಕೇಜೀಗಟ್ಲೆ ತಿಂದೆನು। ಆದ್ರೂನೂ ನಾನು ಮಾಡುವುದೇನು। ತುಂಬಲಿಲ್ಲ ಹೊಟ್ಟೆ ಇನ್ನು॥2 ಸಾರಿ॥ ॥1॥ ಸಂಪಾದಿಸೋದೆಲ್ಲಾ ಈ ಹೊಟ್ಟೆಗಾಗಿಯೇ। ಖರ್ಚು ಮಾಡೋದೆಲ್ಲಾ ಈ ಹೊಟ್ಟೆಗಾಗಿಯೇ। ಇದನ್ನು ಧ್ಯೇಯವಾಗಿಟ್ಟು ನಾ ಬದುಕಿರುವೆ। ಕೊನೆ ಉಸಿರಿರೋವರ್ಗು ಹೊಟ್ಟೆಯ ಧ್ಯಾನವೇ। ನಮೋ ಉದರ ದೇವ, ಪ್ರಭೋ ಉದರದೇವ। ನೀನೇ ನಮ್ಮನೆಲ್ಲ ಕಾವ॥2ಸಾರಿ॥2॥

**ಎಷ್ಟೋ ವರುಷದ ಹಿಂದೆ** **ರಾಗ: ಮೋಹನ**

ಎಷ್ಟೋ ವರುಷದ ಹಿಂದೆ ವ್ಯಾಪಾರಿವೇಷದಲಿ। ಅಲೆಯುತ್ತಾ ಬಂದವರು ನೀವಲ್ಲವೇ। ಹಳ್ಳಿಯಾನಾಡೆಂದು

ಹೊನ್ನಿನಾಬೀಡೆಂದು। ಕೋಟಿಗಳಾ ಇಟ್ಟವರು ನೀವಲ್ಲವೇ।।1।। ದೇಶಗಳಾ ಯುದ್ಧದಲಿ ರಾಜ್ಯಗಳಾ ಭಾಗದಲಿ। ಅಡ್ಡನಿಂತವರು ನೀವಲ್ಲವೇ। ಯುಕ್ತಿಯಲಿ ಮುಂದಾಗಿ ಕೀರ್ತಿಯಲಿ ಹಿಂದಾಗಿ। ವರ್ಷದಲಿ ಆಳ್ದವರು ನೀವಲ್ಲವೇ।।2।। ದೆಹಲಿಯಲಿ ನಿಂಥಂಥಾ ರಾಜ್ಯಗಳಾ ಗೆಲಿದಂಥಾ। ಸಾಮ್ರಾಜ್ಯನಾಶಿಗಳು ನೀವಲ್ಲವೇ। ದೊರೆತನವೇ ತಮದೆಂದು ದೇಶವೇ ತಮದೆಂದು ಮೋಸವನು ಮಾಡ್ದವರು ನೀವಲ್ಲವೇ।।3।। ಸೆರೆಯಲ್ಲಿ ಬಂಧಿಸಿದ ಗುಂಡಿಂದ ಸಾಯಿಸಿದ। ಕೆಂಪುಕೋತಿಗಳು ನೀವಲ್ಲವೇ। ಮೋಸದಲಿ ದರ್ಪದಲಿ ರಾಜ್ಯವನು ಗಳಿಸಿಟ್ಟ। ಕೆಂಪು ಕೋತಿಗಳು ನೀವಲ್ಲವೇ।।4।। ಕಪ್ಪೆಂದು ಜರೆದವರೂ ಮುದ್ದೆಂದೂ ಕರೆದವರೂ। ಮುದದಿಂದಾಮೆರೆದವರು ನೀವಲ್ಲವೇ। ನೀವು ಹಿಂದುಗಳೆಂದು ಅವರು ಮುಸ್ಲಿಮರೆಂದು । ಬಿನ್ನವನು ತೋರ್ದವರು ನೀವಲ್ಲವೇ।।5।। ಸ್ವರಾಜ್ಯ ಬರಲೆಂದು ಸ್ವಾತಂತ್ರ್ಯವೆಂದಾಗ। ಧಾಳೀ ನಡೆಸಿದ ಹೇಡಿ ನೀವಲ್ಲವೇ। ಸ್ವಾತಂತ್ರ್ಯ ಕೈದಿಗಳಾಹೆದರಿಸಿ। ಕೊಂದವರು ನೀವಲ್ಲವೇ। ಬಾಂಬುಗಳ ಎಸೆದವರು ನೀವಲ್ಲವೇ।।6।। ಕೋಮುಗಳ ಬೀಡೆಂದು ಮತಗಳ ನಾಡೆಂದು। ತೋರುತ್ತ ಆಳ್ದವರು ನೀವಲ್ಲವೇ। ಹಿಂದುಗಳಾ ನಾಡೆಂದು ಕಲಹದಾ ಬೀಡೆಂದು। ಏನೆನೋ ಕರೆದವರು ನೀವಲ್ಲವೇ।।7।। ಇಂಡಿಯಾವು ಇದು ಎಂದು। ಪಾಕಿಸ್ತಾನ್ ಅದು ಎಂದೂ। ಭಾರತವ ಒಡೆದವರು ನೀವಲ್ಲವೇ। ಭಿನ್ನಮತ ಬೀಜವನೂ ಭಾರತದಿ ಬಿತ್ತವರೂ। ಮತಕೆ ಮತ ತಂದವರು ನೀವಲ್ಲವೇ।।8।। ಹಿರಿತನವೋ ಕಿರಿತನವೋ ಏನಾದರಾಗಲಿ। ಒಂದಾಗಿ ದುಡಿದವರು ನಾವಲ್ಲವೇ। ದೇಶವೆಲ್ಲ ಒಂದಾಗಿ ರಾಜ್ಯದಲಿ ಬೇರಾಗಿ। ಸ್ವಾತಂತ್ರ್ಯದಲಿ ಜೊತೆಯಾಗಿ ನಾವಿಲ್ಲವೇ ನಾವಿಲ್ಲವೇ।।9।।

### ಏನು ಮಾಡಲಿ ಹೇಗೆ ಓದಲಿ — ರಾಗ:ಮೋಹನ

ಏನು ಮಾಡಲಿ ಹೇಗೆ ಓದಲಿ ಸಾರಿಬರುತಿಹ ಪರೀಕ್ಷೆಗೆ। ಬೀಸಿ ಬರುವ ಸುಖದ ನಿದ್ರೆಯ ಹೇಗೆ ದೂರತಳ್ಳಲೀ।।1।। ಎಳೆಯುತಿಹ ಕಣ್ಣು ಗಳೆರಡನೂ। ನೀರು ಚುಮುಕಿಸಿ ಒರೆಸುತಾ? ಹಿಡಿಯದಿಹ ಪಾಠಗಳನೆಂತು। ಹಿಡಿಸಿ ಕೊಳ್ವುದ ಅರಿಯೆನು।।2।। ದೂರಪಥದಲಿ ಏನನರಿಯದ ಬಾಲರಾಟವ ನೋಡುತ। ಅವರ ನೋಡುತ ಅಂತೆ ಹೋಲುವ। ಪರೀಕ್ಷೆಯಾಟವ ಮುಗಿಸುವೆ ।।3।। ಈ ಪರೀಕ್ಷೆಯು ತೃಣ ಸಮಾನವು। ನಮ್ಮ ಜೀವನದಂತೆಯೇ। ಇಂತಹ ಪರೀಕ್ಷೆ ಬರುವುದ್ಹೋಗ್ವುದು। ಚಿಂತೆಯೀತರವೇತಕೇ।।4।।

### ಏನು ಮಾಡಿದರೇನು ಓಟು ಸಿಗದು

ಏನು ಮಾಡಿದರೇನು ಓಟು ಸಿಗದು। ದಾನವೇಶ್ವರ ನೀನು ಸರಿಹೋಗದನಕ।।ಪ।। ಅರುಣೋದಯದಲೆದ್ದು ಮನೆಮನೆಗೆ ಅಲೆದಾಡಿ। ಕರವ ಮುಗಿದೇ ಮುಗಿದೆ ನಿಜವಿಲ್ಲದೆ। ಚರಣ ಸಾಷ್ಟಾಂಗವನು ಮಾಡಿದರು ನೀನೀಗ। ಕರುಣೆ ತೋರೆವು ನಾವು ತಿಳಿಯೆಲವೊ ಮೂರ್ಖ।।1।। ಭಾಷಣವ ಮಾಡಿದೆ ವೇಷಗಳ ಹಾಕಿದೆ। ಭೇಷಾಗಿ ಸುಳ್ಳುಗಳ ಸುತ್ತಿ ಬಗೆದೆ। ಕಾಷಾಯ ವಸ್ತ್ರ ಧಾರಿಗಳ ಪಾದಕೆ ಬಿದ್ದೆ। ಕಾಸು ಮಾಡಲು ಎಂಥ ಕುಟಿಲವೋ ಧೂರ್ತ।।2।।

### ಒಂದಾನೊಂದು ಊರು ಆ ಊರದು — ರಾಗ:ಶಂಕರಾಭರಣ

ಒಂದಾನೊಂದು ಊರು ಆ ಊರದು ಸೋಮಾರಿಗಳೂರು। ಉಂಡು ತಿಂದು ತೇಗಿ ಅವರ ಹೊಟ್ಟೆಯು ಬೆಳೆಯಿತು ಢುಂ ಎಂದು।।1।। ಉಂಡು ತಿಂದು ತೇಗುತಲಿರುವುದು ಒಂದೇ ನಮ್ಮಯ ಕೆಲಸವು ಎಂದು। ತಿಳಿಯುತಲವರು ಕೆಲಸವ ಮಾಡರು ಹಾಳಾಯಿತೂರು ಅವರಿಂದ।।2।। ಅವರ ನಡುವೆ ಜೈ ಕಿಸಾನ್। ಆಡಿ ಬೆಳೆದ ಮರಿಮಸ್ತಾನ್। ಪೇಟೆಗೆ ನಡೆದು ಓದು ಕಲಿತು ಬಂದನು ಊರಿಗೆ ಜುಂ ಎಂದು।।3।। ಸೋಮಾರಿಗಳಿಗೆ ಜೈ ಕಿಸಾನ್। ನಮ್ಮ ಕೆಲಸವೇ ಸರಿ ಎಂದು। ಬುದ್ಧಿಯ ತಿಳಿಸಿ ನಡೆಯಿರಿ ಮುಂದಕೆ ಜೈ।।4।। ಜವಾನ್ ಎನ್ನುತ ಸಾಗಿದ ಹೊಲಕೆ ಜೈ ಜವಾನ್ ಜೈ ಕಿಸಾನ್।ಜೈ ಜವಾನ್ ಜೈ ಕಿಸಾನ್।।5।।

### ಒಂದು ದಿನ ಪೆದ್ದನ ಹೆಂಡತಿ

ಒಂದು ದಿನ ಪೆದ್ದನ ಹೆಂಡತಿ ಲಾಡು ಮಾಡಿದ್ಲು। ಯಾರು ನೋಡಬಾರದೆಂದು ಡಬ್ಬೀಲಿ ಮುಚ್ಚಿಟ್ಲು।। ಅಲ್ಲಿಂದ ಬಂದ

ಪೆದ್ದ ಬಗ್ಗಿ ನೋಡಿದ। ಚೆಂಡು ಚೆಂಡು ಚೆಂಡು ಎಂದು ಆಟವಾಡಿದ॥1॥ ಒಂದು ದಿನ ಪೆದ್ದನ ಹೆಂಡತಿ ಕೋಡ್ಬಳೆ ಮಾಡಿದ್ಲು। ಯಾರು ನೋಡಬಾರದೆಂದು ಡಬ್ಬೀಲೀ ಮುಚ್ಚಿಟ್ಲು। ಅಲ್ಲಿಂದ ಬಂದ ಪೆದ್ದ ಬಗ್ಗಿ ನೋಡಿದ ಬಳೆ ಬಳೆ ಬಳೆ ಎಂದು ಕೈಗೆ ಹಾಕಿದ॥2॥ ಒಂದು ದಿನ ಪೆದ್ದನ ಹೆಂಡತಿ ಕೀರು ಮಾಡಿದ್ಲು। ಯಾರು ನೋಡಬಾರದೆಂದು ಡಬ್ಬೀಲಿಮುಚ್ಚಿಟ್ಟು। ಅಲ್ಲಿಂದ ಬಂದ ಪೆದ್ದ ಬಗ್ಗಿ ನೋಡಿದಾ। ನೀರು ನೀರು ನೀರು ಎಂದು ಸ್ನಾನ ಮಾಡಿದ॥3॥ ಒಂದು ದಿನ ಪೆದ್ದನ ಹೆಂಡತಿ ಕೇಸರಿಬಾತು ಮಾಡಿದ್ಲು। ಯಾರು ನೋಡಬಾರದೆಂದು ಡಬ್ಬೀಲಿ ಮುಚ್ಚಿಟ್ಟು। ಅಲ್ಲಿಂದ ಬಂದ ಪೆದ್ದ ಡಬ್ಬಿ ನೋಡಿದ ಗಂಧ ಗಂಧ ಗಂಧ ಎಂದು ಮೈಗೆ ತೀಡಿದ॥4॥ ಒಂದು ದಿನ ಪೆದ್ದನ ಹೆಂಡತಿ ಮೈಸೂರುಪಾಕು ಮಾಡಿದ್ಲು। ಯಾರು ನೋಡಬಾರದೆಂದು ಡಬ್ಬಿಗೆ ಹಾಕಿದ್ಲು। ಅಲ್ಲಿಂದ ಬಂದ ಪೆದ್ದ ಡಬ್ಬಿ ನೋಡಿದ। ಸೋಪು ಸೋಪು ಸೋಪು ಎಂದು ಮೈಗೆ ಹಚ್ಚಿದ॥

## ಅಂದು ಶಾಲೆಗೆ ನೀನು ಬಂದಿರುವ

ಅಂದು ಶಾಲೆಗೆ ನೀನು ಬಂದಿರುವ ಸಮಯದಲಿ ಪಕ್ಕನೇ ನಕ್ಕವಳು ನಾನಲ್ಲವೇ। ಒಂದು ದಿನ ನೀ ಎನ್ನ ಮಂದಿರಕೆ ಬಂದಾಗ ಬೇಡ ಹೋಗೆಂದವಳು ನಾನಲ್ಲವೇ॥1॥ ನೊಂದ ಮನದಿಂದ ನಿನೀಮನೆ ಮುಂದೆ ಕುಳಿತಿರಲು। ಒಳಗೇ ಬಾರೆಂದವಳು ನಾನಲ್ಲವೇ। ಒಳಬಂದು ನಿ ಎನ್ನ ಕರಗಳನು ಪಿಡಿದಾಗ। ಖಳನೆಂದು ಬೈದವಳು ನಾನಲ್ಲವೇ॥2॥ ಠಕ್ಕು ಮಾತುಗಳಿಗೆ ಸಿಕ್ಕಿ ಬೀಳೆನೆಂದು। ಎಚ್ಚರಿಕೆ ಕೊಟ್ಟವಳು ನಾನಲ್ಲವೆ। ಬೈದ ಮಾತಿಗೆ ನೀನು। ಸದ್ದಿಲ್ಲದೆ ಹೊರಟಾಗ। ಕ್ಷಮೆಯ ಯಾಚಿಸಿದವಳು ನಾನಲ್ಲವೇ॥3॥ ಸವಿಮಾತಹೇಳಿ ಕವಿಯೆಂದು ಮೂದಲಿಸಿ। ತೋಟದೆಡೆ ನಡೆದವಳು ನಾನಲ್ಲವೇ। ಬೇನೆ ನಿನಗಾಯ್ತೆಂದು ಮನೆಯವರು ಅಂದಾಗ। ಕಣ್ಣನೀರ ಮಿಡಿದವಳು ನಾನಲ್ಲವೇ॥4॥ ಮಾತನಾಡದೆ ನೀನು ಕೂತಾಗನಾಬಂದು। ಸವಿಮುದ್ದನಿತ್ತವಳು ನಾನಲ್ಲವೇ। ಒಂದು ದಿನ ನಾನಿನಗೆ। ಹೃದಯವರ್ಪಿಸಿದಾಗ। ನೆನೆಹು ಹುಟ್ಟಿಸಿದವಳು ನಾನಲ್ಲವೆ॥5॥

## ಕನ್ಯ ಮಂಡಲ ಮಧ್ಯದೊಳಗೆ

ರಾಗ:ಖರಹರಪ್ರಿಯ

ಕನ್ಯ ಮಂಡಲ ಮಧ್ಯದೊಳಗೆ ನೆತ್ತಿಯಿಂದ ಸ್ವಲ್ಪ ಕೆಳಗೆ ತಮಿಳು ಚಿತ್ರಗೀತೆಯೊಂದು ಅರಚಿ ಕರೆಯುತಲಿದ್ದಿತು॥ ಚೌತಿ ಗಣಪ ನೀನು ಬಾರೋ ನವಮಿ ರಾಮ ಬೇಗ ಬಾರೋ। ಏಸುಕ್ರಿಸ್ತ ಓಡಿ ಬಾರೋ ಎಂದು ಸ್ಪೀಕರ್ ಕರೆಯಲು॥1॥ ಲೌಡ್ ಸ್ಪೀಕರ್ ಧ್ವನಿಯ ಕೇಳಿ ಎಲ್ಲಾ ದೇವರು ಬಂದು ನಿಂತು। ಕಣ್ಣಿನಿಂದ ನೀರು ಸುರಿಸಿ ಅಲ್ಲಿ ತುಂಬಿತು ಬಿಂದಿಗೆ॥2॥ ದೇವ ನಮ್ಮ ಕ್ಷಮಿಸಬೇಕು। ಭಕ್ತಿಗೀತೆ ಕೇಳಬೇಕು। ನೀವು ಬಂದು ಹಾಡಬೇಕು। ಎಂದು ಸ್ಪೀಕರ್ ಹೇಳಿತು॥3॥ ಯಾವಗೀತೆ ಕೇಳಲಮ್ಮ। ಯಾವ ಗೀತೆ ಹಾಡಲಮ್ಮ। ಯಾವ ಭಾಷೆ ಮೆಚ್ಚಲಮ್ಮ। ಯಾರು ನನಗೆ ಹಿತವರು॥4॥ ತೆಲುಗಿನಲ್ಲಿ ತೆಂಗು ಚೆನ್ನ। ತಮಿಳಿನಲ್ಲಿ ಬೆಳ್ಳಿ ಚೆನ್ನ। ಕನ್ನಡಿಗನ ಗೀತೆ ಚೆನ್ನ। ಎಂದು ಸ್ಪೀಕರ್ ಅರಚಿತು॥5॥ ಮುಂದೆ ಬಂದರೆ ಅರಚಬೇಡಿ। ಹಿಂದಿನಿಂದ ಕೂಗಬೇಡಿ। ಕಿವುಡನಲ್ಲ ಎಂದು ತಿಳಿಯಿರಿ।ದೇವ ನಿಮ್ಮ ಗಣಪನ॥6॥ ಹೆಬ್ಬುಲಿಯು ನೀನಾದೆ ಮಗುವೆ। ತಬ್ಬಲಿಯು ನಾನಾಗಿ ಹೋಗುವೆ। ಇಬ್ಬರ ಋಣ ತೀರಿತೆಂದು ತಬ್ಬಿಕೊಂಡಿತು ಸ್ಪೀಕರು॥7॥ ಇಲಿಯನೇರಿ ಹೊರಟ ಗಣಪನು। ಕೇಳಲಾರದೆ ಮೂರ್ಛೆಹೋದನು। ನೀರಿನಲ್ಲಿ ಅದ್ದಿ ಬಿಟ್ಟರು। ತಬ್ಬಲಿಯ ನೀ ಗಣಪನ॥8॥

## ಕೆಂಪಾದವೋ ಎಲ್ಲ ಕೆಂಪಾದವೋ

ಕೆಂಪಾದವೋ ಎಲ್ಲ ಕೆಂಪಾದವೋ॥ ಹಸಿರಿದ್ದ ಗಿಡಮರ ಕಪ್ಪಗಿದ್ದ ಗೋಡೆಲ್ಲ। ಗುಟ್ಕಾದ ಪ್ರಿಯರಿಂದ ಕೆಂಪಾದವೊ॥ ಮೋರಿ ಫುಟ್ಪಾತುಗಳು ಕೆಂಪಾದವೋ। ಹಲ್ಲು ಬಾಯಿಗಳೆಲ್ಲ ಕೆಂಪಾದವೋ। ಷರ್ಟುಪೈಜಾಮಗಳೆಲ್ಲ ಕೆಂಪಾದವೋ। ಜೊತೆ ಜೊತೆಗೆ ನಡೆದಾಗ। ಉಗಿದಾಗ ಸಿಡಿದಂಥ ಕಾಯುತ್ತಾ ಕುಂತಾಗ। ಪ್ಯಾಂಟಿಗೆ ಕವಿದಂಥ ನುಡಿನುಡಿಯ

ಹೋದಾಗ। ಪಿಚ್ಚಿಂದು ಹೊರಬಂದ ಗುಟ್ಕಾದ ವತಿಯಿಂದ ಕೆಂಪಾದವೋ।ನಗರಗಳೇ ಕೆಂಪಾದವೋ।।

**ಕರುಪ್ಪು ಪೊಣ್ಣೆ ಕನ್ನಾಡಿಯೆ (ತಮಿಳು)** **ರಾಗ: ಕಲ್ಯಾಣಿ**

ಕರುಪ್ಪು ಪೊಣ್ಣೆ ಕನ್ನಾಡಿಯೇ। ಕಾಫಿತಣ್ಣೆ ವೈಯ್ಯಡಿ। ಶೇಪು ಪೊಣ್ಣೆ ಸುಂದರಿಯೆ ಶುಗರ್ ರೊಂಬ ಶೇರಡಿ। ನೀಲ ಪೊಣ್ಣೆ ನಿರ್ಧರಮೆ ನೇರವಂದು ನಿಲ್ಲಡಿ। ಕಾಫಿ ಕಾಫಿ ಕುಡುಡಿ।।ಪ।। ಕಾಫಿ ಕಾಫಿ ಕಾಚಿನ ಪಾಲ್ ಉಮಕ್ಕೊರು ಲೋಟ ಅದು ವೇಂಡಾಂ ಅದು ವೇಂಡಾಂ।।1।। ತಿದ್ದುಪ್ಪ ತಿದುಪ್ಪ ಇರುಕ್ಕುಂ ಟೀಯುಂ ಉಮಕ್ಕೊರು ಲೋಟ। ಅದು ವೇಂಡಾಂ ಅದು ವೇಂಡಾಂ।।2।। ಪುಳಿಪ್ಪ ಪುಳಿಪ್ಪಾ ಇರುಕ್ಕುಂ ಶರಬತ್ ಉಮಕ್ಕೊರು ಲೋಟ।ಅದು ವೇಂಡಾಂ।।3।। ಅದು ವೇಂಡಾಂ। ಕಶಪ್ಪು ಕಶಪ್ಪಾ ಇರುಕ್ಕುಂ ಕಾಫಿ ಉಮಕ್ಕೊರು ಲೋಟ। ಅದು ವೇಣುಂ ಅದು ವೇಣುಂ। ಅದುವೆ ಅದು ವೇಣುಂ।।4।।

**ಕರುನಾಡ ಬಾನಿನಿಂದ (ಸ್ವಯಂವರ)** **ರಾಗ: ಮೋಹನ**

ವಧು : ಕರುನಾಡ ಬಾನಿನಿಂದ ಕನ್ನಡದ ಹುಡ್ಗೀ ಇಳಿದು ಬಂದ್ಲು ಕೈಯನ್ ಹಿಡಿಯೋ ಶೂರನೊಬ್ಬ ಬೇಕಾಗಿದೆ। ಅಚ್ಚ ಕನ್ನಡದ್ ಧೀರ ಇದ್ರೆ ಮೆಚ್ಚಿ ಮದುವೆ ಆಗ್ತೀನ್ ನಾನು ಮುಚ್ಚುಮರೆ ಇಲ್ಲದಂತ ಶಪಥ ನಂದು।।ಪ।।

ವರ : ಮೈಸೂರ ಹುಡ್ಗ ನಾನು। ಮೀಸೆ ತಿರುವಿ ಹೇಳುತೀನಿ। ಮೋಸ ಹೋಗಬೇಡ ಬಾರೆ ನನ್ನ ಹಿಂದೇ ಹಿಂದೇ । ಕಲ್ಚರ್ ಇದೆ ಕೈಂಡ್‌ನೆಸ್ (Kindness) ಇದೆ ಸೊಗಸಾದ ಹಿಸ್ಟ್ರಿ (history) ಇದೆ ಲೋಕದಲ್ಲಿ ಫಸ್ಟ್ ಕ್ಲಾಸ್ (first class) ।।1।।

ವಧು : ರೈಟೋ, ರೈಟೋ ಸ್ವಲ್ಪ ವೈಟೋ ವೈಟೋ।।

ವರ : ಮಂಗಳೂರದ ಮಾಣಿಯಾನು ಮಲ್ಲೆ ಮಾಲೆಕೊಂಡು ಬರ್ಪೆ ಕೆಕ್ಕೈಲ್ ಪಾಡವೆ ಭಲಾ ಪೊಣ್ಣೆ ಭಾರೀ ಕಂಡು। ನಾಲೂರು ಬಂದರ್ ಉಂಡು ಎಂಕ ನಿಂಕ ಜೋಡಿ ಸಮ ಉಂಡು।।2।। ವಧು:- ಬೊಡ್ಚಿ ಬೊಡ್ಚಿ ಎನಕು ಬಂದರು ಬೊಡ್ಚಿ। ಸರ್ಲ ಸರ್ಲ।।

ವರ : ಆದೋನಿ ಅಪ್ಪೈ ಶೆಟ್ಟಿ ಚಪ್ತಾನೆ ಏಮಿ ಚೂಡು ಅಂದರಿಕೆ ಗೊಪ್ಪುವಾಡೆ ನೇನೆ ಚೂಡು। ವಾಳ್ಳು ವೀಳ್ಳು ಎವರು ಒದ್ದು ಮಾವಾಳ್ಳು ಎವರು ಒದ್ದು ಪೆಳ್ಳಿ ಚೇಸ್ಕೋ(2ಸಾರಿ)

ವಧು : ನೀಕೆಂದುಕೋ ನೀಕೆಂದುಕೋ (2 ಸಾರಿ)

ವರ : ಹೈದರ್‌ಬಾದಿನಿಂದ ನಾನು ಉಷಾರಾಗಿ ಹಾರಿಬಂದೆ ಚೋಕ್ರಿ ನಿನ್ನ ಸೂರತ್ ಕಂಡು ಚುಪ್ಕೆ ನಿಂತೆ। ತಕರಾರಿಲ್ಲದೆ ಶಾದಿ ಕರಲೋ ಹಸ್ತೆ ಹಸ್ತೆ ಸಾಥ್ ಚಲೋ

ವಧು : ಠೆಹರೋ ಠೆಹರೋ ಜರಾ ಸಬರ್ ಕರೋ

ವರ : ಬಿಗುಮಾನವೇಕೆ ನೀರೇ ಬೆಳಗಾವು ನೋಡ ಬಾರೆ। ಜಗ್ಗಿ ಜಗ್ಗಿ ಜಿಂಕೆ ಹಂಗೆ ಅಗ್ದಿ ಚಲೋ ಬಂಗಲೆ ಇದೆ। ರಗಡ್ ರೊಕ್ಕ ರೇಸಾಗಿದೆ, ಬಕ್ರಿ ಜುಣಕ ಜಗಿಯುವಂತೆ। ಬೆಳ್ಳಿಕಾಟಿನಾಗೆ ಶುದ್ಧ ಕನ್ನಡ ಮಾತಾಡಿ। ಭೇದಭಾವ ದೂರಮಾಡಿ ನಿದ್ದೆ ಬಿಟ್ಟು ದುಡಿಯಿರಯ್ಯ। ನಮ್ಮೆಳ್ಗೆಗೆ।।

ವಧು : ಹೌದೋ ಹೌದೋ ಜ್ಞಾನ ಬಂತೋ ಬಂತೋ ಒಪ್ದೇ ಒಪ್ದೇ ನಾನು ನಿನ್ನ ಒಪ್ದೇ ಒಪ್ದೇ।।

**ಕಲಿತ ಹುಡುಗಿ ಕುದುರಿ ಹಾಂಗ** **ರಾಗ: ಖರಹರಪ್ರಿಯ**

ಕಲಿತ ಹುಡುಗಿ ಕುದುರಿ ಹಾಂಗ ಕುಣೆತ್ತ ಬರುತಿತ್ತ। ಅದನ್ನ ಕಂಡ ನಮ್ಮ ಹಳ್ಳಿ ಮಂದಿಯ ದಿಕ್ಕು ತಪ್ಪಿ ಹೋಯ್ತಾ।।ಪ।। ಉಟ್ಟಸೀರೆಯ ಕೆಳಗಿನ ದಡಿಯು, ಕಸ ಹೊಡಿಯುತಿತ್ತ। ಮುನಸಿಪಾಲ್ಟಿ ಆಳಿಗಿಂತ ಅದು ಚೊಕ್ಕ ಮಾಡುತಿತ್ತ।। ಜುಳುಪಿ ಬಿಟ್ಟ ಬಾಬ್ಬಿ ರಿಬ್ಬನ್ ಬಿಗಿದು ಕಟ್ಟಿತ್ತ। ಬಳುಕಿ ಬಳುಕು ನಡೆವಾಗ ಬಾಬ್ಬಿ ರಿಬ್ಬನ್ ಹಾರುತ್ತಲೇ ಇತ್ತ।।1।।

ಬಣ್ಣದ ಮುಖಕೆ ಬಳಿದ ಪೌಡರ್ ಹಾರ್ ಹಾರಿ ಬರುತಿತ್ತ। ಹಣೆಗೆ ಹಚ್ಚಿದ ಕುಂಕುಮ ಸಣ್ಣಗೆ ಹಣಕಿ ಹಾಕುತಿತ್ತ। ಬಳೇ ಕಾಣದ ಬಲಗೈ ಅಂತೂ ಬಣ ಬಣ ಅಂತಿತ್ತ। ಎಡಗೈ ನಾಗೆ ರಿಸ್ಟವಾಚ್ ಒಂದು ಬಿಗೀದು ಕುಂತಿತ್ತ।।2।। ಶೆಟ್ಟರ ಹುಡುಗ ಯಾಲಕ್ಕೀ ತೂಗಾಕೆ ತಕ್ಕಡಿ ಹಿಡಿದಿದ್ದ। ಗಿರಾಕಿ ಕೂಡ ಮಾತಾಡುವಾಗ ಹುಡುಗಿ ಮುಂದೆ ಬಂತ।। ಯಾಲಕ್ಕಿ ತೂಕ ಹಾಕುವ ಕೈ ಹಾಗೇ ಹಾಕುತಿತ್ತ। ಹುಡುಗಿ ಗುಂಗಿನಲ್ಲಿ ಯಾಲಕ್ಕಿಯ ಡಬ್ಬ ಖಾಲಿಯಾಗಿ ಹೋಯ್ತಾ।।3।। ಪೂಜಾರ ಹುಡುಗ ಹನುಮದೇವರ ಪೂಜೆಗೆ ನಡೆದಿದ್ದ। ಪೂಜೆಗೆ ವ್ಯಾಳೆ ಮೀರಿ ಹೋಯ್ತಂತ ಗಡಬಡಿಸುತಿದ್ದ।। ದಾರಿಗೆ ಬೆಕ್ಕು ಅಡ್ಡಬಂದ್ವಾಂಗ ಹುಡುಗಿ ಅಡ್ಡಬಂತ। ಹುಡುಗಿ ನೋಡಿದ ಪೂಜಾರ ಹುಡುಗ ಜೊಲ್ಲು ಸುರಿಸ್ತನಿಂತ।।4।। ನಾವೆಂದಾರ ಹುಡುಗನ ಮುಂದೆ ಮುದುಕೊಂದು ಕುಂತಿದ್ದ। ಹುಡುಗನ ಕೈಯಿ ಮುದುಕನ ಮೀಸೆ ಕಟಾ ಮಾಡುತಿತ್ತ।। ಹುಡುಗಿ ನೋಡಿದ ಹುಡುಗ ಮುಂದಿನ ಮುದುಕನ್ನೇ ಮರೆತ। ಲೇ ಅಂತ ಮುದುಕ ವದರುವಾಗ ಮೂಗು ಜಿಗಿದು ಬಿತ್ತ।।5।। ಬರ್ ಅಂತ ಹುಡುಗಿ ಗೌಡರ ಮನೀ ಒಳಗೆ ಹೊಕ್ತಾ। ಹುಡುಗಿ ನೋಡಿದ ಗೌಡರ ಮೀಸೆ ಪಕಾಪಕಾ ಕುಣಿತ।। ಗೌಡರ ರೀತಿ ಕಂಡ ಗೌಡತಿ ಜಗಳಕ್ಕೆ ನಿಂತ್ಲ। ಊರಿಂದೂರೇ ಬಗಳ ನೋಡಕ್ಕೆ ಕಿತ್ತು ಓಡಿ ಬಂತ।।6।। ಕೂಡಿದ ಮಂದಿಗೆ ಕೈಯ ಮುಗಿಯುತ ಹುಡುಗಿ ಹೇಳುತಿತ್ತ। ಬಹಳಾ ಮಕ್ಕಳನು ಪಡಿಬ್ಯಾಡಿಂತ ಭಾಷಣವ ಬಿಗಿತಾ।। ಕುಟುಂಬ ಯೋಜನೆ ಪ್ರಚಾರದ ಹುಡುಗಿ ಅನ್ನೊದು ಕೇಳಿಬಂತಾ। ಕೂಡಿದ ಮಂದಿ ಹೇಳದೆ ಕೇಳದೆ ಕಿತ್ತು ಓಡಿಬಂತಾ।।7।।

## ಕಾಣದಂತೆ ಮಾಯವಾದಳೋ

ಕಾಣದಂತೆ ಮಾಯವಾದಳೋ। ನನ್ನ ಹೆಂಡ್ತಿ ತವರು ಮನೆ ಸೇರಿಕೊಂಡಳೊ।।ಪ।। ಕೊಡುವುದನ್ನು ಬಿಟ್ಟು। ಇರುವುದನ್ನು ಹೊತ್ತು ಕಾಣದಂತೆ ಓಡಿಹೋದಳೋ। ನನ್ನ ಹೆಂಡ್ತಿ।।1।। ಕಾಫಿಪುಡಿ ಎಲ್ಲಿ ಇಟ್ಟಳೋ। ನನ್ನ ಹೆಂಡ್ತಿ ಸಕ್ರೆಡಬ್ಬಿ ಎಲ್ಲಿಇಟ್ಟಳೋ। ಕಾಫಿಪುಡಿ ಸಕ್ರೆ ಡಬ್ಬಿ ಹಾಲು ನೀರು ಸದಾ ಇಲ್ಲದಿರಲು। ಕಾಣದಂತೆ ಮಾಯ ವಾದಳೋ।।2।। ಚಿನ್ನದ ಸರ ಬೇಕು ಎಂದಳೋ। ನನ್ನ ಹೆಂಡ್ತಿ। ಮುತ್ತಿನ ಬಳೆಬೇಕು ಎಂದಳೋ। ಅವೆರಡನ್ನು ನಾ ತರದಿರಲು ಕಾಣದಂತೆ ಮಾಯವಾದಳೋ।।3।। ಅಡಿಗೆ ಮಾಡಿ ತಿನ್ನಿ ಎಂದಳೋ। ನನ್ನ ಹೆಂಡ್ತಿ ಊಟಮಾಡಿ ಮಲಗಿ ಎಂದಳೋ। ಅಕ್ಕಿ, ಬೇಳೆ ಕಾಯಿಪಲ್ಲೆ ಏನೂ ನಾನು ತರದಿರಲು। ಕಾಣದಂತೆ ಮಾಯವಾದಳೋ ನನ್ನ ಹೆಂಡ್ತಿ।।4।।

## ಕಾಫಿ ಮಾಡೆ ರಾಣಿ

ಕಾಫಿ ಮಾಡೆ ರಾಣಿ।।2ಸಾರಿ।।ಹಾಲಿಲ್ಲರಾಜ।।2ಸಾರಿ।। ಅಂಗಡೀಗೆ ಹೋಗ್ತೀನಿ। ಹಾಲನ್ನು ತರ್ತೀನಿ।।1।। ಸಕ್ಕರೆ ಇಲ್ಲ ರಾಜ।।2ಸಾರಿ।। ಅಂಗಡೀಗೆ ಹೋಗ್ತೀನಿ ಸಕ್ಕರೆಯನ್ನು ತರ್ತೀನಿ।।2।। ಕಾಫಿಪುಡಿ ಇಲ್ಲ ।।2ಸಾರಿ।। ಅಂಗಡೀಗೆ ಹೋಗ್ತೀನಿ ಕಾಫಿಪುಡಿ ತರ್ತೀನಿ।।3।। ಕಾಫಿ ಮಾಡೋಕ್ ಬರೋಲ್ಲ।। ಇಷ್ಟ್ ಹೇಳಕ್ ಯಾಕೆ ನನ್ನ ತಲೆ ತಿನ್ತೀಯ।।4।।

## ಕಾಶಿಗ್ಹೋದ ನಂ ಭಾವ

ಕಾಶಿಗ್ಹೋದ ನಂ ಭಾವ ಕಬ್ಬಿಣ್ದ್‌ದೋಣೇಲಿ। ರಾಶಿ ರಾಶಿ ಗಂಗೆ ತರೋಕ್ ಸೊಳ್ಳೆ ಪರದೇಲಿ।। ಪ।। ತಂಗಿ ಯಮುನಾದೇವಿ ಅವಳ ಸಂಗವಾಯ್ತೆಂದುಬ್ಬಿ ಉಬ್ಬಿ। ಗಂಗಾದೇವಿ ಉಕ್ಕಿ ಉಕ್ಕಿ ಬೀಸಿ ಬೀಸಿ ದೋಣಿ ಕುಕ್ಕಿ। ಭಾವ ಅತ್ತು ಬಿಕ್ಕಿಬಿಕ್ಕಿ ಬಂಡೆ ತಾಕಿ ದೋಣಿ ಒಡ್ದು। ಸೊಳ್ಳೇ ಪರದೆ ಭಾವನ್ ಬಡ್ದು। ಮಂಡೆ ದವಡೆ ಪಟ್ಟಾಗೊಡ್ದು। ಕಾಶೀ ಆಸೆ ನಾಶವಾಗಿ। ಮೀಸೇ ಉಳಿದಿದ್ ಎಷ್ಟೋ ವಾಸೀಂತ। ಕಾಶೀಂದ್ ಬಂದ ನಂ ಭಾವ।।1।।

## ಕೈಲಾಸ ಪರ್ವತದರಮನೆಯಲ್ಲಿ (ಲಾವಣಿ)

ಕೈಲಾಸ ಪರ್ವತದರಮನೆಯಲ್ಲಿ। ತಲೆನೋವು ಬಂದಿತು ಶಿವನಿಗೆ ಅಲ್ಲಿ। ಕಾವಲುಗಾರರಿಗತಿ ಗೋಳಾಟ। ಪಾರ್ವತಿಗೆ

ಬಂದಿತು ಪೀಕಲಾಟ॥1॥ ಗಿರಿಜೆಯು ಹೊಡೆದಳು ಗಣಪತಿಯನ್ನು। ಮುರಿದಳು ಕೈಲಿದ್ದ ಕಡುಬನ್ನು। ಕೆಲವರು ಹೋದರು ಕೆಲವರು ನಿಂದರು। ಕೆಲವರು ಮೇಲ್‌ಕೆಳಗೆ ನೋಡುತ ನಿಂತರು॥2॥ ತಲೆನೋವ್ ಸಹಿಸದೆ ಈಶ್ವರನಾಗ। ಕಳುಹಿದ ಕಪಿಯನ್ನು ಕರೆತರಲಾಗ। ಓಡುತ ಹೋದರು ಮಾರುತಿ ಬಳಿಗೆ। ಕಾಡಿಸುತಿದೆ ತಲೆನೋವ್ ಈಶ್ವರನಿಗೆ। ಎಂದರು ಜನರೆಲ್ಲಾ॥3॥ ಒಂದಾಗಿ ಬಂದರು ಮಾರುತಿ ಮುಂದಾಗಿ। ಸಂದಿಯಲ್ ನೋಡಿದ ಈಶ್ವರನಾಗ। ವಂದಿಸಿದನು ಮಾರುತಿ ಬೇಗ। ಏನೆಲೋ ಮಾರುತಿ ತಾರೋ ಔಷಧಿ। ನೀನೇ ಹೋಗೋ ಭಟರುಗಳ್ ಬೇಡ। ಎಂದ್ಹೇಳಿದ ಹರ ತೊದಲುತಲಾಗ॥4॥ ಮುಂದಕೆ ನಡೆದನು ಕಪಿಯಾಗ। ಬಾಬಾ ಬುಡನ್ ಗಿರಿಗ್ಹಾರಿದನು। ಗಿಡದಿಂದ್ ಬೀಜವ ಬಿಡಿಸಿದನು। ಕಪಿರಾಜನು ಕೈಲಾಸಕೆ ಬಂದು। ಈಶ್ವರ ಬೀಜವ ತೆಗೆದುಕೊ ಎಂದ॥5॥ ಕೆಂಪಗೆ ಬಾಣಲೆಯಲಿ ಹುರಿದ್ ಪುಡಿಮಾಡಿ। ಮರಳುವ ನೀರಿಗೆ ಪುಡಿಹಾಕಿ ಶೋಧಿಸಿ। ಹಾಲುಸಕ್ಕರೆ ಬೆರೆಸಿ ಬಿಸಿ ಬಿಸಿಯಾಗಿ ಪಾನವ ಮಾಡೆಂದು। ಈ ಪರಿ ಹೇಳಿದ ಕಪಿಯೊಡೆಯ। ಮಾಡಿಸಿ ಕುಡಿದನು ಜಗದೊಡೆಯ॥6॥ ಅಂತೂ ಈಶ್ವರನಾ ತಲೆನೋವು ಇಲ್ಲದೆ ಓಡಿತು ಅಲ್ಲಿಂದ॥ ಕಪಿಯು ತಂದದ್ದು ಕಪಿಬೀಜವೆಂದು। ಹೆಸರಿಟ್ಟನು ಈಶ್ವರನಂದು। ಜನಗಳ ಬಾಯಲಿ ದೀರ್ಘವು ಬಂದು। ಆಯಿತು ಕಾಫೀ ಬೀಜವೆಂದು॥7॥

### ಗರಿಮಾಗರಿ ಖಾರದವಲಕ್ಕಿ — ರಾಗ: ಷಣ್ಮುಖಪ್ರಿಯ

ಗರಿಮಾಗರಿ ಖಾರದವಲಕ್ಕಿ॥ಪ॥ ವಾಂಗಿಬಾತು ಕೇಸರಿಬಾತು ನಿಂಬೆಬಾತು ಬಕಾಳ ಬಾತು॥1॥ ಉದ್ದಿನ್ ಕಡುಬು ಕಾಯ್ ಕಡುಬು। ಹಬ್ಬದಲ್ ಮಾಡೋ ಕಡುಬು॥2॥ ದೋಸೆ ತರ್ತಾರೆ ತಿನ್ನೋಕೆ। ಗರಿ ಗರಿ ದೋಸೆ ಗಮಗಮ ದೋಸೆ। ದಪದಪ ದೋಸೆ ರುಚಿರುಚಿ ದೋಸೆ। ಬಿಸಿಬಿಸಿ ದೋಸೆ ತರ್ತಾರೆ ತಿನ್ನೋಕೆ॥3॥ ಅಕ್ಕಿ ತಿರ್ವಿ ತಿರ್ವಿ ದೋಸೆ ಹುಯ್ದು ಹುಯ್ದು ಚಟ್ನಿ ಹಾಕಿ ಹಾಕಿ ದೋಸೆ ತರ್ತಾರೆ ತಿನ್ನೋಕೆ॥4॥ ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು, ಎಂಟು ದೋಸೆ ತರ್ತಾರೆ ತಿನ್ನೋಕೆ॥5॥ ನೀದಪ ನಿಮಪದಪ ನಿಮಮದಪ। ಪದಮದಪ ನೀವೆಲ್ಲಾ ದಪದಪ ದಪ ದಪ ದೋಸೆ ತರ್ತಾರೆ ತಿನ್ನೋಕೆ॥6॥

### ಗಾಡಿ ಬುಲಾ ರಹೀ ಹೈ — ರಾಗ: ಖರಹರಪ್ರಿಯ

ಗಾಡಿ ಬುಲಾ ರಹೀ ಹೈ ದೋಸ್ತ್॥ಪ॥ ಮನೇಲಿದ್ರೆ ಹೆಂಡ್ತಿಕಾಟ। ಆಫೀಸ್‌ಗ್ಹೋದ್ರೆ ಬಾಸ್‌ನ ಕಾಟ। ಇವರಿಬ್ರ ನಡುವೆ ಸಿಲುಕಿ। ನನಗ್ತುಂಬ ಪೀಕಲಾಟ॥1॥ ಜೋರಾಗೇನಾ ಮಾತಾಡಿದ್ರೇ। ಬೆಳಗಿನ ಊಟ ಖೋತಾ। ಲೇಟಾದ ಮೇಲೆ ನಾ ಆಫೀಸ್ ಗ್ಹೋದ್ರೆ ತಾಶುರುವು ಬಾಸ್ ನ ಉಗಿತ। ಕೈ ಹಿಡಿದ ಕೆಲಸ ಹಾಳು। ದಿನಪೂರ್ತಿ ಏನೋ ಗೋಳು॥2॥ ಒಟಿಗೀಟಿ ಮಾಡಿದ್ದಿವ್ನಿ। ಅಮ್ನೋರ್ಗೆ ತುಂಬ ಮುನಿಸು। ಕೊನೇಗ್ ರಾತ್ರಿ ನಂಗುಳಿಯೋದು ತಂಗಳಾದ ತಿಂಡಿ ತಿನಿಸು। ರಾತ್ರೆಯೆಲ್ಲ ಪೂರ ಕ್ಲಾಸ್। ಬಚಾವಾಗೋಕಿಲ್ಲ ಛಾನ್ಸ್॥3॥ ಸಂಬಳಾನೆಲ್ಲಾ ಇವಳಿಗೆ ಕೊಟ್ರೆ। ಊರಗಲ ಇವಳ ವದನ। ಅಪ್ಪಿತಪ್ಪಿ ಕೊಡ್ದೆಹೋದ್ರೆ। ಉಳಿಯೋದಿಲ್ಲ ನನ್ನ ಮಾನ। ಈ ಎಲ್ಲ ತಂಟೆಯಿಂದ ಪಾರಾಗೋ ಮಾರ್ಗ ತೋರೋ॥4॥

### ಗುಟ್ಟಳ್ಳಿ ಹುಡ್ಗುರ್ನೆಲ್ಲಾ

ಗುಟ್ಟಳ್ಳಿ ಹುಡ್ಗುರ್ನೆಲ್ಲಾ ಒಂದ್ಗೂಡ್ಸಿ ಗುಟ್ಟಳ್ಳೀಲಿ। ಒಂದಪ ಲಂಕಾದಾನ ನಾಟ್ಕ ಆಡ್ಸಿದ್ದೆ। ಅನುಮಣ್ಣ ಆರ್ಮನಿ ಮಾಸ್ಟ್ರು ತಿಮ್ಮಣ್ಣ ತಬಲ ಮಾಸ್ಟ್ರು ನಾನೇನೊ ಆಂಜನೇಯನ್ ಪಾಲ್ಟು ಮಾಡಿದ್ದೆ। ಕೆಳ್ಮನೆ ಬೀರನ್ ಬಿಟ್ಟು ಕಾರಳ್ಳಿ ಬೋರಕ್ಕನ್ನ। ಸೀತಮ್ಮನ್ ಪಾರ್ಟ್‌ಮಾಡಕ್ ಕರ್‍ಕೊಂಬಂದಿದ್ದೆ॥ ಪದವಸಿ ಬರ್ತಾಯಿತ್ತು ಮಾತ್‌ಮಾತ್ರ ಮರ್ತೋಗಿತ್ತು। ಇಂಗಿದ್ರು ಗುಡಿತಾವ್ ಚಪ್ರ ಆಕ್ಸೆಬುಟ್ಟೆ॥ ಎಲೆ ಅಡ್ಕೆ ಚೀಲಹೊತ್ತು ಪುಟ್ಟನ್ ಕೈಲ್‌ಗಿಲ್ಕಿ ಕೊಟ್ಟು ನನ್ನೆಂಡ್ತಿ ಮುಂದಿನ್ ಸಾಲ್ನಾಗ್ ಕುಂತೇ ಬಿಟ್ಲು। ಮುಂದೆಲ್ಲಾ ಹೆಂಗಸ್ರು ಕುಂತು ಹಿಂದೆಲ್ಲಾ ಗಂಡಸ್ರು ಕುಂತು। ಅಕ್ಕಪಕ್ಕ ಪಡ್ಡೆ ಹೈಕ್ಳು ನಿಂತೇ ಬಿಟ್ರು॥ ಮಂಡ್ಯದ್ ಜವರಪ್ಪನ್ ಸೀನ್ಸ್‌ನ ರಂಗಾಗೊ ಬಣ್ಣದ್ ಲೈಟ್ನ। ಕಿರಿಚಾಡೋ ಗ್ರಾಮಾಫೋನ್ ಗಾನವನೇಳ್ತು। ಒಳಗೆ ಮೈಕ್ ಗುಂ ಅಂತು ಟೇಜ್‌ನಾಗ್ ತಬಲ ಢಂ ಅಂತು ನನ್ ಕೈ ಕಾಲ್ ಝುಂ ಅಂತು ಆಟ ಸುರುವಾಯ್ತು॥ ನಾಟ್ಕ

ಬಲ್ ಬಿರ್ಸಾಗಿತ್ತು ನಂಗೊಸಿ ಚಳಿಯಾಯ್ತು। ಮೂಲೇಲ್ ಕೂತ್ ಬೀಡಿ ಹಚ್ಚಿ ಮೂರ್ ದಂಎಳ್ದೆ।। ಅಷ್ಟರೊಳ್ಗೆ ನನ್ ಪಾಲ್ಟ್ ಬಂತು ಅಂತ್ ಯಾರೋ ಹೇಳೇಬಿಟ್ರು। ಎಂಗಿದ್ನೋ ಅಂಗೆ ನಾನು ಟೇಜ್‌ನಾಗ್ ನೆಗ್ದ್‌ಬಿಟ್ಟೆ.....।। ಬಾಯಲ್ ಮೋಟ್ ಬೀಡಿ ಐತೆ ಬಾಲಕೈಗ್ ಸುತ್ಕೊಂಡೈತೆ। ಆಂಜನೇಯಂಗ್ ಇರಬೇಕಾದ ಗದೆಯೇ ಇಲ್ಲಾ। ಕೊಟ್ಟೆಲಿದ್ ಕಪ್ಪೆ ಹಂಗೆ ಎಗರೆಗರಿ ನೆಗ್‌ನೆಗ್‌ದಂಗೆ। ಒಟ್ಟೆಲಿದ್ದ ಮಾತೆಲ್ಲಾ ಹೊರಗೆ ಬರಲಿಲ್ಲ। ಸೀತಮ್ಮನ್ ಸೀನ್ನಾಗೆ ಉಂಗ್ರಾನ ಕೊಡುವಾಗ ಬೋರಕ್ಕನ ಕೈ ಇಡ್ಕೊಂಡ್ ಕುಣ್‌ದಾಡ್ ಬಿಟ್ಟೆ। ಚೂಡಾಮಣಿ ಕೇಳ್ದಾಗ ಸೊಂಟ್‌ದಾಗ್ ಅದಿಲ್ದಾಗ। ಕಡ್ಡಿಪುಡಿ ಗಂಟನ್ನೆ ಈಸ್ಕೊಂಡೋಗ್‌ಬಿಟ್ಟೆ। ರಾವಣಪ್ಪನ್ ಸೀನ್ನಾಗೆ ಹನುಮಪ್ಪನ್ ಹಾರ್ಮೋನಿ।। ಕಿರಿಚಾಡಿ ವೂಳಿಡ್ತಾ ಕುಯ್ಯೋಂ ಅಂತಿತ್ತು। ಸುಳ್ಳಾ ಪಟ್ಟೆ ಪದ ಅಂದ್ರು ಹೊರಗ್ ಒನ್ಸ್ ಮೋರ್ ಅಂದ್ರು। ಸೀಮೆಎಣ್ಣೆ ಬಾಲಕ್ ಬೆಂಕಿ ಹಚ್ಚೆಬಿಟ್ರು.....।। ಜಯರಾಮ ಅನ್‌ಕಂಡಿ ಬಾಲಕೈಲ್ ಇಟ್‌ಕ್ಕೊಂಡಿ ನಾನೇನೊ ಹಾರ್ ಬಿಟ್ಟೆ ಆಂಜನೇಯ್ನಂಗೆ। ಮೇಲ್ ಪರದ್ಗೆ ಬೆಂಕಿತಗಲಿ ಕೆಳಪರದ್ಗೆ ಅಂಟ್ಕೊಂಡಿ। ಹೊಗೆ ಒಳಗೊಳ್ಗೆ ತುಂಬ್ಕೊಂಡಿ ಆಟ ನಿಂತ್ಹೋಯ್ತು।। ಎದ್ರುಗಿದ್ದ್ ರಾವಣಪ್ಪ ಹಿಂದಿನಿಂದ ಒದ್ನಪ್ಪ। ಧೊಪ್ಪಂತ ಹಾರ್ಮೋನಿಮಾಸ್ತ್ರ ಕಾಲ್ತಾವ್ ಬಿದ್ನಪ್ಪ। ಕಾಲ್ಹಿಡಿದ ನನ್ ಕೈಗೆನೇ ಹಾರ್ಮೋನಿ ಕೈಗೆ ಕೊಟ್ಟು। ಅಲ್ಲಿಂದ ಇಲ್ಲಿ ತನಕ ಕಳ್ಸ್‌ಕೊಟ್ಟವ್ರಪ್ಪಾ।।

### ಗಂಡು ಬಂದಿದೆ ತಂಗಿ

ರಾಗ: ಶಿವರಂಜಿನಿ

ಗಂಡು ಬಂದಿದೆ ತಂಗಿ ಗಂಡು ಬಂದಿದೆ। ಬರದೆ ಬರದೆ ಗಂಡು ಬಂದಿದೆ ತಂಗಿ ಗಂಡು ಬಂದಿದೆ।।ಪ।। ಅಮ್ಮನಂತೆ ಕುಳ್ಳಗಿದ್ದ। ಅಕ್ಕನಂತೆ ಕರ್‍ರಗಿದ್ದ। ಅಪ್ಪನ ಮೀಸೆ ಬೆಳೆಸಿದ್ದ। ಆನೆಯಂತೆ ಕೊಬ್ಬಿದ್ದ।।1।। ಕಣ್ಣಲ್ಲೊಂದು ಕೂಲಿಂಗ್ ಗ್ಲಾಸ್। ಕೈಯಲ್ಲೊಂದು ವಾಕಿಂಗ್ ಸ್ಟಿಕ್। ಬಾಯಲಿ ಒಂದು ಬರ್‌ಕ್ಲಿ ಸಿಗರೇಟ್। ಜೇಬಲ್ಲೊಂದು ಎಮ್ಟಿ ಪ್ಯಾಕೆಟ್।।2।। ಬೆಕ್ಕಿನಂತೆ ಕಣ್ಣು ಇದ್ದು। ಗರುಡನಂತೆ ಮೂಗು ಇದ್ದು ಮೂಗಿನ ಕೆಳಗೆ ಉಬ್ಬಿದ ಹಲ್ಲು। ಎದ್ದು ನಿಂತಿತ್ತು।।3।। ಕೈಗಳೆರಡು ಸೊಟ್ಟಗಿದು। ಕಾಲ್ಗಳೆರಡು ಡೊಂಕಾಗಿದ್ದು। ಮೂಗಲಿ ಗಂಗೆಯು ಹೊರಬರುತಿತ್ತು। ನೋಡಲು ಅಸಹ್ಯ ಆಗುತ್ತಿತ್ತು।।4।।

### ಗೋಳೂ ಗೋಳೆನ್ನ ಗೋಳೇ

ಗೋಳೂ ಗೋಳೆನ್ನ ಗೋಳೇ। ಈ ರೇಷನ್ ಕೂಪನ್ ಕಮಿಷನ್। ಗೋಳೂ ಗೋಳೆನ್ನ ಗೋಳೆ।।ಪ।। ಅಕ್ಕಿ ರೂಪಾಯಿಗೆ ಒಂದು ಸೇರು। ಸಕ್ಕರೆ ಆದ್ರೆ ಸವಾಸೇರಿ।। ಸಿಕ್ತಾದ್ಹೋದ್ರು ಗೋಧಿ। ರಾಯ್ರು  ಮಕ್ಕಳೇಲ್ಲಾ ದುಡಿದೆ ಎದ್ರು।।1।। ಹಿಟ್ಟೂ ಅನ್ನ ಮನೆಯೊಳಿಲ್ಲಾ। ರೊಟ್ಟಿ ಸುದ್ದಿ ಮೊದಲೆ ಇಲ್ಲಾ।। ಹೊಟ್ಟೆ ಹಸಿವು ತಡೆಯೊದಿಲ್ಲಾ। ಹೋಟ್ಲೆಗ್ಹೋದ್ರೆ ಮೊದಲೇ ಇಲ್ಲ।।2।। ಕಳ್ಳ ಸಂತೆಯೊಳಗೆ ಲೇಸು। ಎಲ್ಲಾ ಸಾಮಾನುಂಟುಭೇಷು।। ಕೋಳ್ಳೋದಕ್ಕೆ ಇಲ್ಲಾ ಕಾಸು। ವಳ್ಳೆ ರೇಷನ್ ಬಂತು ರೋಸು।।3।। ಎನ್ನಾದಾಯ ಕುಡಿಕೆ ಗಾತ್ರಾ। ದಿನವೂ ಖರ್ಚು ಮಡಿಕೆ ಗಾತ್ರ।। ಮನೆಯೊಳಾಕ ಗಡಿಗೆ ಗಾತ್ರ। ಮನೆಯ ಬಾಡಿಗೆ ಆನೆ ಗಾತ್ರ।।4।। ಮುನ್ನಾ ಏನಾಗೋದೋ ಅಕಟ। ಎನ್ನುವಂತ ಭೀತಿ ಪ್ರಕಟ।। ನಿನ್ನೆಯಿಂದ ರೇಷನ್ ಕಾಟ। ಇನ್ನೂ ಕಳೆಯೋ ನೀಲಕಂಠ।।5।।

### ಚಿನ್ನ ಶಿರಿ ಮಾಪುಳ್ಳೆ (ತಮಿಳು)

ರಾಗ: ಶ್ರೀ

ಚಿನ್ನ ಶಿರಿ ಮಾಪುಳ್ಳೆ। ಯನ್‌ಮುತ್ತೇಯನ್‌ಕಣ್ಣೆ। ಶಿರಿ ಪುಳ್ಳೆತೇಡಿಯೇತಾಂಕುಡುತ್ತಾಳ್।। ಆಲಾಲೆಲಕ್ಷ್ಮಿಪೋಲ್। ಮಾಮಿಯಾರ್ ಮಾಮನಾರ್। ಅರ್ತಿಲೆಕೊಳಿಂದೆಪ್ಪೋಲ್। ಮಚ್ಚಿನ ಮಾರ್ ಕುತ್ತವಿಳಕ್ಕೆಪೋಲ್। ವರತ್ತಾಳಂ। ಕೂತ್ತಾಡಿವಿರಿಕ್ಕಿರಾ ಪೋಲ್‌ನಾತನಾರುಂ। ಅಚ್ಚೀ ಅಡಿಚ್ಚಾಪೋಲೆ ಅವಮಾನಂಗಳಂ।।

## ಜಯತು ಜಯ ವೋಟಲಾ

ಜಯತು ಜಯ ವೋಟಲಾ। ನಿನ್ನ ನಾಮವು ಶಕ್ತಿಧಾಮವು ಗಳಿಕೆಯಾ ಮೂಲ।।ಪ।। ನಾನು ದೇಶಭಕ್ತ ಪುಂಡರ ನೇತಾ। ಆಯ್ಕೆ ಹೊಂದುವ ಭಾಗ್ಯವನೀತಾ। ಕರುಣೆಸಿ ಬಾರಯ್ಯ ವಿಜಯವ ತಾರಯ್ಯ ನೀ ಎನ್ನ ಭಾಗ್ಯವಯ್ಯಾ ಕೊಂಡುಕೊಳುವೆ

ಘಂಡು ಉಂಟಯ್ಯಾ॥1॥ ಕನಸು ಮನಸಿನ ಆಸೆಯು ನೀನೇ। ಈ ದುರಾತ್ಮನ ಆಸರೆ ನೀನೇ। ಉದ್ಯೋಗವಿಲ್ಲಯ್ಯ ಸಧ್ಯಕ್ಕೆ ಬಿಸಿಯಯ್ಯ। ನೀ ಎನ್ನ ಗೆಲ್ಲಿಸಯ್ಯ ಉಂಡು ತೇಗುವ ಭಂಡನಾನಯ್ಯಾ॥2॥

### ಜಂಗರಕೇರೀಲಿ ಜಾನಮ್ಮ ರಾಗ: ಪುನ್ನಾಗವರಾಳಿ

ಜಂಗರಕೇರಿಲಿ ಜಾನಮ್ಮ ನಮ್ಮನೆಗೆ ಹೋಗಿ। ತರಬೇಕು। ಅವಲಕ್ಕಿ ಸಿದ್ದೆಯಾ॥ಪ॥ ತಿಂಬೋಬದುಕಿನಲಿ ಪೇಡ್ಸ। ಒಂದ್ದೆಚ್ಚೆಂದು। ತಿಂದೆನೆಂದರೆ ದುಡ್ಡು ಇಲ್ಲವೆ। ದುಡ್ಡು ದುಗ್ಗಾಣೆಯ ಕೊಟ್ಟು ನಾ ತಿಂದರೆ। ಎಷ್ಟು ತಿಂದರು। ಹೊಟ್ಟೆ ತುಂಬದೂ॥1॥ ಹಿಟ್ಟು ಮೊಸರನ್ನಾ। ಕಲಸಿ ದೃಷ್ಟಿಯಿಂದ ನೋಡಿದರೆ। ಹಿಟ್ಟೂ ಮೊಸರನ್ನಾ ಎನಗೆ ಸೇರದೂ। ರೊಟ್ಟಿ ದೋಸೆಯ ಮಾಡಿ। ತಿನ್ನೋಣವೆಂದರೆ। ಇಂಥ ಸುಟ್ಟ ಫಳಾರವೂ ಸೇರದೂ॥2॥ ಹಾಲು ಅವಲಕ್ಕಿಗೆ ಮೇಲೆ ಸಕ್ಕರೆ ಹಾಕಿ। ಏಲಕ್ಕಿ ಪುಡಿಮಾಡಿ ಹಾಕುವೇ। ಆಗ ಕಾಸಿದ ತುಪ್ಪ ಆಗ ಕಾಸಿದ ಬೆಣ್ಣೆ। ಎಂಥ ಸುಟ್ಟ ಫಳಾರವೂ ಸೇರದೂ॥3॥ ಈ ಹಪ್ಪಳ ಸಂಡಿಗೆ ತುಪ್ಪದಲ್ಲೇ ಕರೆದೂ। ಒಪ್ಪದಿಂದಲೆ ನಾನು ಇಟ್ಟನೇ। ಮಕ್ಕಳು ಕೇಳಿದರೆ। ಥಟ್ಟಾಕು ಕೊಡದಾಗೆ। ಇಂಥ ಸುಟ್ಟಾಫಳಾರವು ಸೇರದೂ॥4॥

### ಝುಕ್ಕಣಕ್ಕ2 ಜೈ ರಾಗ: ಮಧ್ಯಮಾವತಿ

ಝುಕ್ಕಣಕ್ಕ ಝುಕ್ಕಣಕ್ಕ, ಝುಕ್ಕಣಕ್ಕ ಜೈ। ದೊಡ್ಡಣ್ಣೋರು ಕುಣಿತಿದ್ರು ಥಕ್ಕ ದಿನ್ನ ದಿನ್ನ ತೈ। ಕುಣೀತಿದ್ರೆ ದೊಡ್ಡಣ್ಣೋರು ಹೊತ್ತುಕೊಂಡು ಮೈ। ಇಟ್ಟೇ ಬಿಟ್ರು ಪುಟ್ಟಮ್ನೋರು ನೆತ್ತಿ ಮೇಲೆ ಕೈ॥1॥ ದಾರೀಲಾಗ ಬರ್ತಾ ಇದ್ರು ಅಡಕೇ ಮಂಡಿ ಪೈ। ಮಾಡಿಕೊಳ್ತಾ ಏನೋ ಲೆಕ್ಕ ಜೇಬಲ್ಲಿತ್ತು ಕೈ। ದೊಡ್ಡಣ್ಣೋರು ಢಿಕ್ಕೀ ಕೊಟ್ರು ಬಿದ್ದೇ ಬಿಟ್ರು ಪೈ। ಮಂಡೆ ಒಡದ್ರೂ ಜೇಬಲ್ಲಿತ್ತು ಪೈ ಸಮೇತ ಕೈ॥2॥ ದೊಡ್ಡಣ್ಣೋರು ಪೈ ಮಾವನ್ನ ನೋಡ್ತ ಅಂದ್ರು ಹೊಯ್। ಒಬ್ರೆ ಹೀಗೆ ಬೀಳ್ಬಹುದೇನು ಹಿಡೀರಿ ನನ್ನ ಕೈ। ಎತ್ತೋವಾಗ ಕೂಗ್ತಾ ಇದ್ರು ಹನುಮಣ್ಣೋರೆ ಜೈ। ಆಕಡೆಗವ್ರು ಈಕಡೆಗಿವ್ರು ಹೇಳ್ತಾ ಟಾಟಾ ಬೈ॥3॥

### ತಲ್ಲಣಿಸದಿರಿ ನೀವು ಭಾವ ಸ್ವಲ್ಪ ರಾಗ: ಕಾಂಬೋದಿ

ತಲ್ಲಣಿಸದಿರಿ ನೀವು ಭಾವ ಸ್ವಲ್ಪ ಎಲ್ಲ ಬಗೆ ಭಕ್ಷ್ಯಗಳು ಬರುವ ಸಂಶಯ ಬೇಡಾ॥ಪ॥ ಚಕ್ಕುಲಿ ಮುಚ್ಚೋರೆ ಪುರಿವುಂಡೆ ಲಾಡುಗಳು। ಅಕ್ಕನ್ ಎಲೆಗೆ ತಂದು ಬಡಿಸುವರೂ। ಅದರ ರುಚಿ ನೋಡಿ ತಾ ನೋಡಿ। ಪಕ್ಕದಲ್ಲಿರುವ ನಿಮ್ಮೆಲೆಗೆ ಬಡಿಸುವಳೂ॥1॥ ಅಕ್ಕ ಕಚ್ಚಿಟ್ಟ ಆ ಲಾಡು ರುಚಿ ನೀವ್ ನೋಡಿ ಚಕ್ಕುಲಿಯು ಬೇಕಾದರೆ ಧೈರ್ಯದಲಿ ಕೇಳೀ। ಅಕ್ಕ ಪಕ್ಕಗಳಲ್ಲಿ ನಾವೆಲ್ಲ ಇರುವೆವೆಂದು ಮಕಮಕನೆ ಕಣ್ ಬಿಟ್ಟು ನೋಡದಿರಿ ಭಯದೀ॥2॥

### ತಲೆ ಮ್ಯಾಲಿರುವುದು ರೌಂಡಿನ ಹ್ಯಾಟ್ ರಾಗ: ಖರಹರಪ್ರಿಯ

ತಲೆ ಮ್ಯಾಲಿರುವುದು ರೌಂಡಿನ ಹ್ಯಾಟ್ ಕಾಲಲ್ಲಿರುವುದು ಸೊಗಸಿನ ಬೂಟ್ಸ್। ಮೈ ಮೇಲಿರುವುದು ಸುಂದರ ಸೂಟ್। ಬಲಗೈಲಿರುವುದು ಟೆನ್ನಿಸ್ ಬ್ಯಾಟ್। ಇವೆಲ್ಲವು ಇದ್ದರೆ ಜಂಟಲ್ ಮ್ಯಾನ್। ಇವೆಲ್ಲವು ಬಿಟ್ಟರೆ ಜಂಗಲ್ ಮ್ಯಾನ್॥1॥ ಕೂತು ಮಲಗುವುದು ಸ್ಪ್ರಿಂಗ್‌ನ ಕಾಟ್। ಎಡಗೈಲಿರುವುದು ರ್‍ಯಾಡೋ ವಾಚ್। ಮಾರ್ನಿಂಗ್ ಕಾಫಿ ಟೀಗಳ ಡ್ರಿಂಕಿಂಗ್। ದಿನವಹಿ ಶೇವಿಂಗ್ ಕಾಫಿಗೆ ಗೋಯಿಂಗ್। ಕುತ್ತಿಗೆ ಬಿಗಿಯಲು ಸಾಫ್ಟಿನ ಕಾಲರ್। ಎದೆ ಮೇಲಿರುವುದು ರೋಜ್ ಫ್ಲವರ್। ತಲೆಯಲಿ ಕೂದಲು ಕ್ರಾಫಿಂಗ್ ಬಾಯಲಿ ಸಿಗರೇಟ್ ಸ್ಮೋಕಿಂಗ್॥2॥ ಇವೆಲ್ಲವು ಇದ್ದರೆ ಜಂಟಲ್ ಮ್ಯಾನ್। ಇವೆಲ್ಲವು ಬಿಟ್ಟರೆ ಜಂಗಲ್ ಮ್ಯಾನ್॥ ಕಣ್ಣಲ್ಲಿ ಹೊಳೆಯುವ ಗಾಜಿನ ಸ್ಪೆಕ್ಸ್। ಕೈಯಲ್ಲೀರುವುದು ವಾಕಿಂಗ್ ಸ್ಟಿಕ್। ರಂಗ್ ರಂಗ್ ನೇತಾಡುವ ಟೈ। ಕೈಯಲ್ ನೋಡಲು ಪೈಸಾ ನೈ। ಇವೆಲ್ಲವು ಇದ್ದರೆ ಜಂಟಲ್ ಮ್ಯಾನ್। ಇವೆಲ್ಲವು ಬಿಟ್ಟರೆ ಜಂಗಲ್ ಮ್ಯಾನ್॥3॥

## ತಿಮ್ಮರಾಯಪ್ಪ ಎಂಬಾತೊಬ್ಬ

ತಿಮ್ಮರಾಯಪ್ಪ ಎಂಬಾತೊಬ್ಬ ನಮ್ಮೂರ್ನಾಗಿದ್ದಾ। ಅವನು ಬೀಡಿ ಚುಟ್ಟ ಕೊಟ್ಟು ಅವ್ನ ಮೂರ್ ಮಾತ್ ಕಲ್ತ್‌ಕೊಂಡ। ಎಸ್ ನೋ ಆಲ್‌ರೈಟ್ ಎಂಬೋದನ್ನು। ಮೂರ್ ದಿನ ಕಲ್ತ್‌ಕೊಂಡ॥1॥ ಗಡಿಯಾರ್ ಕಟ್ಕೊಂಡ್, ಹೆಂಗ್ಸರ ನೋಡ್ಕೊಂಡ್ ಬೀದೀಲಿ ಬರ್‍ತಿದ್ದ, ಪೋಲಿಸಪ್ಪ ಕಳ್ಳನ್ ಹುಡ್ಕೊಂಡ್ ಬಗ್ ಬಗ್ ನೋಡ್ತಿದ್ದ। ಗಡಿಯಾರ್ ಕದ್ದೋನ್ ನೀನೆ ಎಂದ ನಾನು ಎಸ್ ಅಂದೆ॥2॥ ದುಡ್ಡು ಕೊಟ್ಟಿದ್ಯ ಗಡಿಯಾರ್‌ಕೆಂದ ನಾನು ನೋ ಎಂದೆ। ಬಂದೀಖಾನೀಗೆ ಬರ್‍ತೀ ಎಂದ ನಾನು ಆಲ್‌ರೈಟ್ ಅಂದೆ। ಏನ್ ಹೇಳ್ಲಿ ನನ್ನ ಕಥೆಯಾ॥3॥ ನನ್ ಮಾನಾ ಕಳಕೊಂಡ್ ಕಥೆಯಾ। ಇಂಗ್ಲೀಷ್‌ನಿಂದ ಹಾಳ್। ಇಂಗ್ಲೀಷ್‌ನಿಂದ ಬಲು ಕೇಡು। ನಮ್ಮೂರ್ ದೇವ್ರೆ ಕಾಪಾಡು॥4॥

## ತೀರ್ಥಯಾತ್ರೆಗೆಂದು ಜನರು

ರಾಗ: ಶುಭಪಂತುವರಾಳಿ

ತೀರ್ಥಯಾತ್ರೆಗೆಂದು ಜನರು ಹೋಗುತಿರುವರು। ದೇಗುಲವನು ಬಳಸಿಕೊಂಡು ಮನೆಗೆ ಬರುವರು॥ಪ॥ ಹಣವ ಕೊಟ್ಟು ಹಣ್ಣುಕಾಯಿ ಹೂವ ಕೊಳ್ವರು। ಅದನು ಪೂಜಾರಿ ಕೈಗೆ ಕೊಟ್ಟು ಕೈಯ್ಯ ಮುಗಿವರು॥ ದೇಹವಿಲ್ಲ ರೂಪವಿಲ್ಲ ಎನ್ನುತಿರುವರು। ಕಲ್ಲಕೆತ್ತಿ ರೂಪಕೊಟ್ಟು ಕೈಯ್ಯ ಮುಗಿವರು॥1॥ ಅಂಗಾಂಗ ಕಾಣುವಂಥ ಸೀರೆ ಕೊಳ್ವರು। ಆ ಸೀರೆ ಉಟ್ಟು ಶಿವನ ಪೂಜೆ ಮಾಡುತಿರುವರು॥ ಶಿವನ ಪೂಜೆಗೆಂದು ಬಂದ ಪ್ರಾಯದ್ಹುಡುಗರು। ಆ ಸೀರೆ ನೋಡಿ ಶಿವನ ಪೂಜೆ ಮರೆತೆ ಬಿಟ್ಟರು॥2॥ ಪೂಜಾರಿ ನಾನೆಂದು ಹಾರಾಡ್ವರು। ಮುಖವ ಮುಚ್ಚಿಕೊಂಡು ಬಂದು ಶರಾಬ್ ಕುಡಿವರು॥ ಶರಾಬ್ ಕುಡಿದ ಜ್ಞಾನದಲ್ಲಿ ಪೂಜಾರಿಯು। ಶಿವನ ಪೂಜೆಯನ್ನು ಅವನು ಮರೆತೆ ಬಿಟ್ಟನು॥3॥

## ನಮ್ಮ ಅಡಿಗೆ ಮನೆಯಲೊಂದು

ನಮ್ಮ ಅಡಿಗೆ ಮನೆಯಲೊಂದು Function ನಡೆದಿತ್ತು। ಸೊಪ್ಪುಗಳೆಲ್ಲ ಸೇರಿಕೊಂಡು ಚಪ್ಪಾಳೆ ಹಾಕ್ತಿತ್ತು। Chief Minister ಚಿರೋಟಿರಾಯ ಅಧ್ಯಕ್ಷನಾಗಿದ್ದ। ಮಾರುದ್ದ ಪಡವಲಕಾಯಿ Speech ಕೊಡ್ತಿತ್ತು। Pineapple ತಾನೆ ಬಂದು Piano ಬಾರಿಸ್ತಿತ್ತು। ಅದನ್ನು ನೋಡಿ ಬೆಂಡೇಕಾಯಿ Band ಬಾರಿಸ್ತಿತ್ತು। ಅಡಿಗೆ ಭಟ್ಟ ಆಲೂಗಡ್ಡೆ ಅಡುಗೆ ಮಾಡ್ತಿದ್ದಾ। ಕುಂಬಳ ಕಾಯಿ ಕುಣ್‌ಕೊಂಡ್ ಕುಣ್‌ಕೊಂಡ್ Party ಗೆ ಬಂದಿತ್ತು। ಅದನ್ ನೋಡಿ ಬದನೆಕಾಯಿ ಬಿದ್ ಬಿದ್ ನಗ್ತಿತ್ತು। ಮೆಣಸಿನಕಾಯಿ ತಾನೇ ಹೋಗಿ Friends ನ ಕರೆದ್ ಬಂತು। ಸೌತೆಕಾಯಿ ಬಂದೋರ್‍ಗೆಲ್ಲಾ ಸ್ವಾಗತ ಬಯಸ್ತಿತ್ತು। ಟೊಮೇಟೋ ತಾನೇ ಸುಂದರಿಯೆಂದು ತಾಂಬೂಲ ಕೊಡ್‌ತಿತ್ತು॥

## ನಮ್ಮ ಮನೆಯ ಅಡಿಗೆ

ನಮ್ಮ ಮನೆಯ ಅಡಿಗೆ ಮನೆಯಲಿ ಮೀಂಟಿಗ್ ನಡೆದಿತ್ತಾ। ಅಬ್ಬರದಿಂದ ಅವಲಕ್ಕಿ ಅಧ್ಯಕ್ಷನಾಗಿತ್ತಾ॥ಪ॥ ದಂಮ್ರೋಟ್ ಬಂದು ಢಮಢಮ ಎಂದು ಡಂಗೂರ ಸಾರಿತ್ತಾ। ಜಾಮೂನು ಬಂದು ಜನಗಳ ನೋಡಿ ಪ್ರಾರ್ಥನೆ ಹಾಡ್ತಿತ್ತಾ॥1॥ ಕಪ್ಪಿನೊಳಗಿನ ಕಾಫಿ ಎದ್ದು ಸ್ವಾಗತ ಮಾಡ್ತಿತ್ತಾ। ಮೈಸೂರುಪಾಕು ಮೈ ಕೈ ಸವರಿ ಪರಿಚಯ ಮಾಡ್ತಿತ್ತಾ॥2॥ ಪಾತ್ರೆಯೊಳಗಿನ ಖಾರಾ ಭಾತು ಸರಸರ ಬರುತ್ತಿತ್ತಾ। ಸರಿಸರಿ ಎಂದು ಕೇಸರಿಭಾತು ಸರಿಗಮ ಹಾಡ್ತಿತ್ತಾ॥3॥ ಚಕ್ಕುಲಿ ಬಂದು ನಕಲಿ ಮಾಡಿ ಮುರುಮುರು ಅಂತಿತ್ತಾ। ಜಿಲೇಬಿ ಬಂದು ಎಲ್ಲರ ಬಾಯಲಿ ಜೊಲ್ಲು ಸುರಿಸಿತ್ತಾ॥4॥ ಕೊಡಗಿನ ಕಿತ್ತಳೆ ದಾಳಿಂಬೆ ಹಣ್ಣು ಸರ್ವೆಮಾಡ್ತಿತ್ತಾ। ಸರಿಸರಿ ಎಂದು ಸೀಬೆ ಹಣ್ಣು ಸಿಗ್ನಲ್ ಕೊಟ್ಟಿತ್ತಾ॥5॥ ದಡದಡ ಬಂದು ಬೊಂಬಾಯಿ ಬೋಂಡ ಬಡಬಡ ಹೊಂಟಿತ್ತಾ। ಬಾದಾಮಿ ಹಲ್ವ ಬಾಗಿಲಲಿ ನಿಂತು ಭಾಷಣ ಬಿಗಿದಿತ್ತಾ॥6॥ ನಂಜನ ಗೂಡಿನ ರಸಬಾಳೆಹಣ್ಣು ಸಿಹಿಸಿಹಿ ಎನುತಿತ್ತಾ। ಪಾನ್ ಬೀಡಾ ಎದ್ದು ಬಂದು ವಂದನೆ ಮಾಡ್ತಿತ್ತಾ॥7॥ ಅಡಿಗೆ ಮನೆಯ ಬಾಗಿಲು ಮುಚ್ಚಿ ಎಲ್ಲವು ಹೊರಟಿತ್ತಾ। ಸೇಲಂಬಾಳೆ ಸಾಲಾಗಿ ನಿಂತು ಸೆಲ್ಯೂಟ್ ಹೊಡೆದಿತ್ತಾ॥8॥

## ನವಯುಗ ಪದ್ಧತಿ (ಲಾವಣಿ)

ನವಯುಗ ಪದ್ಧತಿ। ನವ ಸ್ತ್ರೀ ಪುರುಷಗೆ। ನವರಂಗಾಟಗಳ್। ಅತಿಯಾಯ್ತೊ। ನಮ್ಮ ನವೀನಕೌತುಕ ಜಗವಾಯ್ತು। ನಮ್ಮ ಲಾವಣಿಯೊಂದಿಗೆ ಬಲವಾಯ್ತೊ। ಕಾವಿಯಧರಿಸಿದ ಕಪಟ। ಸನ್ಯಾಸಿ। ವಿಚಾರ ತತ್ವಗಳತಿಯಾಯ್ತೊ।।1।। ಕನ್ನಡ ದೇಶದ। ಕನ್ನಡ ಜನರಿಗೆ। ಕನ್ನಡ ಭಾಷೆಯು ಮರೆತೋಯ್ತೊ। ವರಕನ್ನಡ। ಇಂಗ್ಲೀಷ್ ಬೆರೆತ್ಹೋಯ್ತು। ಘನ ಹೊನ್ನಿನ ದೇಶವು ಮಣ್ಣಾಯ್ತೊ। ತಿನ್ನಲು ಮನೆಯೊಳು ಸೊನ್ನೆಗಳಾದರು। ಕಣ್ಣಿಗೆ ಕನ್ನಡಿಬೇಕಾಯ್ತೊ।।2।। ಊಟಕೆ ಟೇಬಲ್। ಪಾಠಕೆ ಬೈಬಲ್। ಆಟಕೆ ಇಸ್ಪೀಟ್ ಆಗೊಯ್ತು। ವರಮೋಟಾರ್ ವಾಕಿಂಗ್ ಜೋರಾಯ್ತು। ವರ ಸೋಡಾ ಸಿಗರೇಟ್ಟು। ಸೇದಾಯ್ತು। ಬಾಟಲ್ ಬ್ರಾಂದಿ। ಕೋಟಲೆಯಿಂದಲಿ। ಲಾಟರಿ ಇನ್ಸ್ಟಾಲ್‌ಮೆಂಟ್ ಆಗೋಯ್ತೊ।।3।। ಹೋಟಲ್ ತಿಂಡಿ ನಾಟಕ ಸಿನಿಮಾ। ಕೋಟು ಪೇಟೆ ಯೊಳು। ಹೆ ಚ್ಚಾಯಿತು। ದಿಹ್ಯಾಟ್। ಬೂಟ ಕ್ರಾಫ್ ತಲೆಯಾಯ್ತು। ಮೋಟು ಮೋಟುದ್ದದ। ಮೀಸೆಯಾಯ್ತು। ಕೋಟುರುಮಾಲು। ಪೇಟಪಂಚೆಗಳೂ। ಪೇಟಸುಲ್ತಾನರಿಗೆ ಎಡವಾಯ್ತೊ।।4।। ವಾಸನೆ ಎಣ್ಣೆ ಫೇಸ್ ಫೌಡರ್ ಎಳೆಕೂಸುವೃದ್ಧರಿಗೂ। ಬೇಕಾಯ್ತು। ಬಿಳಿಮೀಸೆಗೆ ಕರಿಮೀಸೆ। ಬಳದಾಯ್ತು। ಪರದೇಶಕೆ ಪೈಸ್ತಲ್ ಜರಿದೋಯ್ತು। ಕಾಸಿಗೆ ಚಕ್ಕರ್ ಭಾಷೆಗೆ ಮಕ್ಕರ್। ವೇಶಭೂಷಣಕೆ। ಜಗವಾಯ್ತು।।5।। ಅಂಗನೆಮಣಿಯರ ನವಕೊಂಗುಪಿಂಗು। ಶೃಂಗಾರಚೇಷ್ಟೆಗಳತಿಯಾಯ್ತು। ಇವ ರಂಗಡಿಬೀದಿ ಬೀದಿಯಲಿ ಅಲೆದಾಯ್ತು। ಬಲು ಸಂಘದಸ್ತ್ರೀಯರನಡೆಕಟ್ಹೋಯ್ತು। ಅಂಗೈರವಿಕೆ. ಮುಂಗೈ ಕರಿಬಳೆ। ಮಂಗಮಾಯವೆ ಆಗೋಯ್ತು।।6।। ಪಂಕಜಾಕ್ಷಿಯರ। ಬಿಂಕದ ಮುಖದೊಳು ಅರಿಶಿನ ಕುಂಕುಮಹಾರೋಯ್ತು। ಇವರಂಕಿನಶಂಕೆಗಳತಿಯಾಯ್ತು। ಬಲು ಸಂಕಟ ಸುದ್ಧಿಯ ಮಾತಾಯ್ತು। ಶಂಕಿನಲೇಸಿನ ಡೊಂಕ ಬೈತಲೆ ಮುಂಕಿನ ಸ್ತ್ರೀಯರ ನಡೆಯಾಯ್ತು।।7।। ಅಡಿ ಇಡಲಾಗದ ಬಡಪಶು।ಪ್ರಾಣಿಗೂ ಬಿಗಿದರೆ ಬಂಡಿಯು। ಬಿಗಿದೋಯ್ತು। ಹಸುಗಳು ಕೊಡುವಂಥ ಹಾಲನು ಕುಡಿದಾಯ್ತು। ಹಸುಗಳು ಕೊಡುಬಿಡುವಾದರೆ। ಒಡನೆಯ ಕಟುಕರವಶ ವಾಯ್ತು।।8।। ಜಂಟಲ್ ಮೆನ್‌ಗಳ ಗಂಟಲುಗಾಣ ಕಂಠಕೆ ಕಾಲರ್ ಬಿಗಿದಾಯ್ತು। ನಿಜವಂಟಿಯ ಕತ್ತಿನ ತೆರ ವಾಯ್ತೊ ಕೈ ಹಂಟಿಂಗೊಂದಬೆಲೆ ಭೇಷಾಯಿತು। ಕಂದ ಕಂಠಗಳಿವ ಶ್ರೀಕಂಠನ ಧ್ಯಾನವು. ಜಂಟಲ್ ಮೆನ್‌ಗಳಿಗಿರ ದೋಯ್ತು।।9।।ಮುದ್ದಿನ ಮಗನಿಗೆ ವಿದ್ಯೆಯ ಕಲಿಸಲು। ಇದ್ದಂತ ಹಣವೆಲ್ಲ ಖರ್ಚ್ಚಾಯ್ತು। ಹೊಲಗದ್ದೆ ಮನೆಮಠ ಮಾರಾಯ್ತು। ಮುದ್ದುಮಗನ ಕೈ। ಕೈ ಗುದ್ದಿಗೆ ಸಿಲುಕಿ। ಮೆದ್ದಲು ಸತಿಪತಿಗಿರದೋಯ್ತು।।10।। ಈ ಶ್ರೇಷ್ಟ ಭಾರತದ ಶ್ರೇಷ್ಠ ಜನಾಂಗದ ಕೋಷ್ಟಕ ಬಾಷೆಯು ಮರೆತೋಯ್ತು। ಗುಡ್ ಮಾಷ್ಟರ್ ಎಸ್ಸೆಸ್ಸೆಕಲಿತಾಯ್ತು। ವಾಟ್ ಮಿಸ್ಟರ್ ಎಸ್ಸೆಸ್ ಮಾಡಲಾಯ್ತು ಅಷ್ಟಿಷ್ಟಲ್ಲದೆ । ವಿಶಿಷ್ಠರ ಬಾಯೊಳು ಬಟ್ಲರ್ ಇಂಗ್ಲೀಷ್। ಬಲವಾಯ್ತು।।11।। ಈ ಭಾರತ ಕೆಲ್ಲ ಸ್ತ್ರೀಬಲ ಸಮಿತಿ ABCD ಯ ಕಲಿತಾಯ್ತು। ಚಿಕ್ಕ ಬೇಬಿಯಕಾರನು। ನಡಸಾಯ್ತು। ABCD ಯ ಶೋಭೆ ಯರೋಗದಿ। ಬೇಬಿಲ್। ಲೇಡಿಯ ರೂಪಾಯ್ತು।।12।।

### ನಾಚ ಬೇಡ ನಾರಿ — ರಾಗ: ಮೋಹನ

ನಾಚ ಬೇಡ ನಾರಿ ನಿನ್ನ ಮಾವ ಬಂದಿವ್ನಿ। ಓಡಿ ಬಂದು ನೋಡ ಬಾರೆ ಏನೇನು ತಂದಿವ್ನಿ।।ಪ।। ಕಿವಿ ಕಿರಿದಾದರು ಓಲೆ ಕೇಳ್ತಿದೆ ಜೀವ। ಓಲೆ ತಂದಿವ್ನಿ ಬಾರೆ ನಿನ್ನ ಹರಕ್ಲು ಕಿವಿಯ ತೋರೆ।।1।। ಮೂಗ್ ಮೊಂಡಾಗಿದ್ರು ಮೂಗನತ್ತು ಕೇಳುತ್ತೆ ಜೀವ। ಮೂಗ್‌ನತ್ತು ತಂದಿವ್ನಿ ಬಾರೆ ನಿನ್ನ ಮೊಂಡ ಮೂಗ ತೋರೆ।।2।। ಕೂದಲು ಕಮ್ಮಿ ಇದ್ರು ಮಲ್ಲಿಗೆ ಕೇಳುತ್ತೆ ಜೀವ। ಮಲ್ಲಿಗೆ ತಂದಿವ್ನಿ ಬಾರೆ ನಿನ್ನ ಕೋಳಿ ಜುಟ್ಟು ತೋರೆ।।3।। ಕಣ್ಣು ಮೆಳ್ಳಗಿದ್ರು ಕಣ್ ಕಪ್ಪು ಕೇಳ್ತದೆ ಜೀವ। ಕಣ್‌ಕಪ್ಪು ತಂದಿವ್ನಿ ಬಾರೆ ನಿನ್ನ ವಂಡ್ರ ಕಣ್‌ತೋರೆ।।4।। ಕೈ ಸೊಟ್ಟಗಿದ್ರೂ ಕೈಬಳೆ ಕೇಳ್ತದೆ ಜೀವ। ಕೈ ಬಳೆ ತಂದೀನ್ ಬಾರೆ ನಿನ್ನ ಮೋಟು ಕೈಯ್ಯ ತೋರೆ।।5।। ಕಾಲ್ ಡೊಂಕಾಗಿದ್ರು ಕಾಲ್ ಕಡಗ ಕೇಳ್ತದೆ ಜೀವ।। ಕಾಲ್ ಕಡಗ ತಂದಿವ್ನಿ ಬಾರೆ ನಿನ್ನ ವಕ್ರ ಕಾಲ ತೋರೆ।।6।। ಕತ್ತು ಉದ್ದಾಗಿದ್ರು ನೆಕ್ಲೇಸ್ ಕೇಳ್ತದೆ ಜೀವ। ನೆಕ್ಲೇಸ್ ತಂದಿವ್ನಿ ಬಾರೆ ನಿನ್ನ ಒಂಟೆ ಕತ್ತ ತೋರೆ।।7।। ಸೊಂಟ ದಪ್ಪಗಿದ್ರು ಡಾಬು ಕೇಳ್ತದೆ ಜೀವ। ಡಾಬು ತಂದಿವ್ನಿ ಬಾರೆ ನಿನ್ನ ದೊಡ್ಡ ಹೊಟ್ಟೆ ತೋರೆ।।8।।

## ನಾನ್ ಬರ್‍ತೀನಿ ಇಸ್ಕೋಲ್‌ಗೆ ರಾಗ: ಶಂಕರಾಭರಣ-ನೋಟ್

ನಾನ್ ಬರ್‍ತೀನಿ ಇಸ್ಕೋಲ್‌ಗೆ ವಿದ್ಯಾ ಕಲ್ಯೋಕೆ॥ಪ॥ ಬಿಎ ಗಿಎ ಓದ್ತೀನಿ ಬಿಎ ಪಾಸ್ ಮಾಡ್ತೀನಿ। ಬಿಎ ಗಿಎ ಆಗ್ದೆಹೋದ್ರೆ। ಬೀದಿಗುಡ್ಸೋಕ್ ಹೋಗ್ತೀನಿ॥1॥ ಎಂಎ ಗಿಂಎ ಓದ್ತೀನಿ ಎಂಎ ಪಾಸ್ ಮಾಡ್ತೀನಿ। ಎಂಎ ಗಿಂಎ ಆಗ್ದೆಹೋದ್ರೆ ಎಮ್ಮೆ ಮೇಯ್ಸೋಕ್ ಹೋಗ್ತೀನಿ॥2॥ ಬಿಎಸ್‌ಸಿ ಗಿಯಸ್‌ಸಿ ಓದ್ತೀನಿ। ಬಿಎಸ್ಸಿ ಪಾಸ್ ಮಾಡ್ತೀನಿ। ಬಿಎಸ್‌ಸಿ ಗಿಯಸ್‌ಸಿ ಆಗ್ದೆಹೋದ್ರೆ ಬಾಟಷೂ ಕಂಪನಿಲಿರ್‍ತೀನಿ॥3॥ ಬಿಕಾಂ ಗೀಕಾಂ ಓದ್ತೀನಿ ಬಿಕಾಂ ಪಾಸ್ ಮಾಡ್ತೀನಿ। ಬಿಕಾಂ ಗೀಕಾಂ ಆಗ್ದೆ ಹೋದ್ರೆ ಬೆಚ್‌ಗೆ ಕಾಮಾಗಿ ಕೂರ್‍ತೀನಿ॥4॥ ಎಲ್‌ಎಂಪಿ ಗಿಲ್ ಎಂಪಿ ಓದ್ತೀನಿ ಎಲ್‌ಎಂಪಿ ಪಾಸ್ ಮಾಡ್ತೀನಿ। ಎಲ್‌ಎಂಪಿ ಗಿಲ್ ಎಂಪಿ ಆಗ್ದೇಹೋದ್ರೆ ಲೌವ್ ಮೇಕಿಂಗ್ ಪ್ರಾಕ್ಟೀಸ್ ಮಾಡ್ತೀನಿ॥5॥ ಎಂಬಿಬಿಎಸ್ ಗಿಂಬಿಬಿಎಸ್ ಓದ್ತೀನಿ। ಎಂಬಿಬಿಎಸ್ ಪಾಸ್ ಮಾಡ್ತೀನಿ। ಎಂಬಿಬಿಎಸ್ ಗಿಂಬಿಬಿಎಸ್ ಆಗ್ದೇಹೋದ್ರೆ ಮನೆ ಬಿಟ್ಟ್ಬ ಬೀದಿ ಸುತ್ತುತೀನಿ॥6॥

## ನಾನು ಹೋಗಿದ್ದೆ ಬೊಂಬಾಯಿಗೆ

ನಾನು ಹೋಗಿದ್ದೆ ಬೊಂಬಾಯಿಗೆ। ಬೊಂಬಾಯಿ ಪಟ್ಣ ನೋಡ್ಲಿಕ್ಕೆ। ಟಿಕೀಟು ಇಲ್ಲದೆ ಟ್ರಾವ್ಲಿಂಗ್ ಮಾಡ್ದೆ ಸೆಕೆಂಡ್ ಕ್ಲಾಸ್‌ನೊಳಗೆ॥ ಇಂಗ್ಲಿಷ್ ಎಂದರೆ ಗೊತ್ತಿಲ್ಲ। ಸ್ಕೂಲಿನ ಮೆಟ್ಲೆ ಹತ್ಲಿಲ್ಲಾ। ಎಸ್, ನೋ, ಆಲ್‌ರೈಟ್ ಇವ್ ಮೂರು ಬಿಟ್ರೆ ಮತ್ತೊಂದು ಬರೋಕಿಲ್ಲ॥1॥ ನನ್ನ ಮೈ ಮೇಲೆ ಫುಲ್ ಸೂಟ್ ತಲೆ ಮೇಲೆ ಹೀಲ್ ಹ್ಯಾಟು। ಕಾಲಿಗೆ ಷೂಸು ಫ್ಯಾನ್ಸಿ ಬೂಡ್ಸು। ಹೇಗಿದೆ ನನ್‌ಡ್ರೆಸ್ಸು। ಹಂಗ್ಡಿಂಗ್ ಮಾಡಿ ನಾ ಕಂಡೆ। ಬೊಂಬಾಯಿ ನಗರದಲ್ ನಾ ನಿಂದೆ। ಟಿಕೇಟು ಮಾಸ್ಟರ್ ನಿಂತಿದ್ದ ನೋಡಿ। ಎದೆ ಎದೆ ಬಡ್ಕೊಂಡೆ। ಪೋಲೀಸ್ ಬಂದು ಕೈ ಹಿಡಿದ। ಥ್ಯಾಂಕ್ಯೂ ನನ್ನೈ ಬಿಡು ಎಂದೆ। ತುಮ್ ಕೊ ಬುಲಾತಾ। ಆಜಾ ಬೈ ಎಂದ। ಪೋಲೀಸ್ ಎಲ್ಲ ಕೂಡ್‌ಬಿಟ್ರು। ತಲೆಗೊಂದೊಂದ್ ಏಟ್ ಕೊಟ್ರು। ಇದ್ದುದನೆಲ್ಲಾ ಸೆಳಕೊಂಡ್ರು। ವಾಪಸ್ ಹೋಗೆಂದ್ ಹೇಳಿಬಿಟ್ರು॥2॥ ಸೂಟು ಬೂಟು ಮಾರ್‍ಬಿಟ್ಟೇ। ಥರ್ಡ್ ಕ್ಲಾಸ್ ಟಿಕೇಟ್ ಕೊಂಡ್ಬಿಟ್ಟೆ। ಕೂಡ್ಲಿಕ್ಕೂ ಜಾಗ ಇಲ್ಲದೆ। ನಿಂತ್ಕೊಂಡು ವಾಪಸ್ ಬಂದ್ಬಿಟ್ಟೆ। ಭಿಕ್ಷೆ ಬೇಡಿದೆ ಆರ್ಕಾಸೂ। ಕೊಡಲಿಲ್ಯಾರೂ ಮೂರ್ಕಾಸೂ। ಕಾಸನು ಕಳಕೊಂಡ್ ಕಂಗಾಲಾದೆ। ಹೊರಟೆ ವಾಪಸ್ಸು॥3॥ ಮೋಜಿನಹಾಡು ನಾಚಿಕೆಗೇಡು। ಕಾಸಿಲ್ಲದಿದ್ದರೆ ಈ ಪಾಡು। ಟಿಕೇಟು ಇಲ್ಲದೆ ಎಲ್ಲಿಗೂ ಹೋಗ್ ಬಾರ್‍ದು। ಹೋದರೆ ಈ ಪಾಡು॥4॥

## ನಾಮ ಹಾಕುವೆನು ಬನ್ನಿರಿ ಎಂದು ರಾಗ:ಕುರಂಜಿ

ನಾಮ ಹಾಕುವೆನು ಬನ್ನಿರಿ ಎಂದು ನಾಮದಯ್ಯ ಬಂದ॥ಪ॥ ನಾಮವ ದಪ್ಪನೆ ಮೊಗದಲಿ ತೀಡಿ। ಸೋಮಯಾಜಿಯ ಮೊಮ್ಮಗ ನಾನು॥ ಆ ಮೊದಲ್ಯಾಂಡನ ಮರಿಮಗನೆಂದು। ನಾಮಹಾಕುವೆನು ಬನ್ನಿರಿ ಎಂದು। ನಾಮದಯ್ಯ ಬಂದ ನಾಮದಯ್ಯ ಬಂದ॥1॥ ಕಾಸ ಎನಗೆ ಕೊಡಿ ಸ್ವರ್ಗಕ್ಕೆ ಹೋಗಿರಿ। ಈಶಗೆ ನಾ ಕಳುಹಿದೆನೆಂದೆನ್ನಿರಿ। ಈಶನು ಏನಂತ ಎದುರಿಗೆ ಬಂದು। ಈಸೀ ಚೀರನು ಕೊಡುವನು ನಿಮಗೆ। ನಾಮದಯ್ಯ ಬಂದ ನಾಮದಯ್ಯ ಬಂದ॥2॥

## ನಿನ್ನ ಹೊಟ್ಟೆಯ ಸುತ್ತಳತೆಯೇ ರಾಗ: ಮೋಹನ

ನಿನ್ನ ಹೊಟ್ಟೆಯ ಸುತ್ತಳತೆಯೇ। ಅದರ ಕಥೆಯು ಹೇಳದೆ। ಊರಿನಲ್ಲಿರೋ ಹೋಟೆಲ್ ತಿಂಡಿ ಎಲ್ಲ ಅದರಲಿ ಅಡಗಿದೆ॥1॥ ಹಗಲು ಇಲ್ಲ ರಾತ್ರಿ ಇಲ್ಲ ನಿನಗೆ ವೇಳೆಯ ಬಂಧನ। ನಿನ್ನ ಹೊಟ್ಟೆಯ ಇಂಜಿನ್‌ಗದುವೆ ಶಕ್ತಿ ನೀಡುವ ಇಂಧನ। ನಿನ್ನಯ ಖ್ಯಾತಿಗೆ ಸಾಧನ॥2॥ ಮದುವೆ ಊಟ, ಮುಂಜಿ ಊಟ। ಧರ್ಮದೂಟವೆ ಆಗಲೀ। ಬೇಡ ಎಂಬ ನುಡಿಯೆ ಹೊರಡದು। ನಿನ್ನ ಸುಂದರ ಬಾಯಲಿ। ಸಾಟಿಯಾರು ಜಗದಲಿ॥3॥ ಹೊಟ್ಟೆಗಾಗಿ ನೀನು ಇಹೆಯೋ ನಿನಗಾಗಿಯೇ ಹೊಟ್ಟೆಯೋ। ಎಂಬು ಮರ್ಮ ಬ್ರಹ್ಮ ಕೂಡ। ಅರಿಯಲಾರದೆ ಕುಳಿತಿಹ। ತಲೆಗೆ ಕೈ ಕೊಟ್ಟು ಕುಳಿತಿಹ॥4॥

### ನೋಡ್ರಣ್ಣಾ ಈ ಶೋಕು ರಾಗ:ಶಂಕರಾಭರಣ

ನೋಡ್ರಣ್ಣಾ ಈ ಶೋಕು। ಈ ಶೋಕಿಗಿಲ್ಲವು ಯಾವ ಬ್ರೇಕು। ಪಟ್ಟಣದ ಪೇಟೆಯಲ್ಲಿ ದಿನವಿಡಿ ನೋಡಿ। ತಲೆಗೆ ಬಂದಿತು ಹೆಡ್ಡೇಕು॥ಪ॥ ಮುಖಕ್ಕೆ ಒಂದಿಂಚು ಪೌಡರು। ಕಾಲಿಗೆ ಹೈ ಹೀಲ್ಡ್ ಸ್ಲಿಪ್ಪರ್ರು। ವಾರಕೆ ಮೂರು ಸಿನಿಮಾ ನೋಡಲು। ಅಪ್ಪನು ಆದನು ಪಾಪರ್ರು॥1॥ ವ್ಯಾನಿಟಿ ಬ್ಯಾಗಿದೆ ಕೈಯಲ್ಲಿ ತೆರೆದು ನೋಡಲು ಅದು ಖಾಲಿ। ತೋಳೇ ಇಲ್ಲದ ಲೇಟೆಸ್ಟ್ ಬ್ಲೌಸ್। ಹೊಳೆಯುವ ಲೋಲಾಕು ಕಿವಿಯಲ್ಲಿ॥2॥ ಸ್ಕರ್ಟುಗಳ್ಹೋಗ್ತಿವೆ ಮೇಲೇರಿ। ಬಳೆಗಳು ಟ್ರಂಕಿನ ತಳಸೇರಿ। ಹೊರಟಳು ಕ್ಲಬ್ಬಿಗೆ ಚಿನಗಾರಿ। ಬಳುಕುತ ನಡೆವಳು ವೈಯ್ಯಾರಿ॥3॥ ಹೆಣ್ಣು ಧರಿಸಿದೆ ಟೈಟ್ ಪ್ಯಾಂಟ್। ಅದರ ಮೇಲೆ ಟೀಷರಟು। ಹೆಣ್ಣೋ ಗಂಡೋ ತಿಳಿಯಲಾರದೆ। ಕೊಟ್ಟೆನು ದೇವ್ರಿಗೆ ಕಂಪ್ಲೇಂಟು॥4॥

### ಪಟ್ಟಣತ್ತು ಪೊಣ್ಣು ನಾನುಂಗ (ತಮಿಳು ಸಂಭಾಷಣಾ ಗೀತೆ) ರಾಗ: ಪುನ್ನಾಗವರಾಳಿ

ಪಟ್ಟಣತ್ತು ಪೊಣ್ಣು ನಾನುಂಗ ಪಾರುಂಗ। ನಾಗರೀಕ ಮಂಗೈ ನಾನುಂಗ। ಎನ್ನೈ ಪಾರ್ತ್ತಾಲೆ ಪಳಂಗಾಲಪಾಟಿ ಗಳೆಲ್ಲೋರುಂ ಪರಿಗಾಸಂ ಪಣ್ಣುರಾಂಗ॥ ಪಟ್ಟಿಕಾಟ್ಟು ಪೊಣ್ಣು ನಾನುಂಗ ಪಾರುಂಗ ಪತ್ತರಮಾತ್ತು ತಂಗಂ ನಾನುಂಗ। ಎನ್ನೈ ಪಾರ್ತಾಲೆ ಪಳಂಗಾಲಪಾಟಿಗಳೆಲ್ಲೋರುಂ ಪಾರಾಟ್ಟಿ ಪುಗಳುರಾಂಗ॥ ಎಟ್ಟ್ಮಣಿಕ್ಕು ಎಳುಂದಿರುಪ್ಪೇನ್। ಬೆಡ್ ಕಾಫಿ ನಾನ್ ಕುಡಿಪ್ಪೇನ್ ಬ್ರೆಷ್ಷಾಲೆ ಪಲ್ ತುಲಕ್ಕಿ ಸೋಪು। ಪೋಟ್ಟು ಕುಳಿಪ್ಪೇನ್ ಕುಳಾಯಿ ನೀರಿಲೈ॥ ವೈಗರೈಲ್ ಎಳುಂದಿರುಪ್ಪೇನ್। ವಾಸಲ್ ಪೆರುಕಿಡುವೇನ್। ಕುಡಮೆಡುತ್ತು ನಡೈನಡೈಯಾಯ್ ಮಂಜಳ್ ಪೂಸಿ ಕುಳಿಪ್ಪೇನ್। ಕುಳತ್ತು ನೀರಿಲೇ॥ ನಾವಲ್ ಪಡಿಪ್ಪೇನ್ ಸಿನಿಮಾ ಪಾರ್ಪೇನ್। ಲಿಪ್ ಸ್ಟಿಕ್ ಪೋಡುವೇನ್। ಪೌಡರ್ ಪೂಸುವೇನ್। ವಾಚ್ ಕಟ್ಟುವೇನ್।ಪೈ ಯ್ಯೆ ಚುಳಟ್ರುವೇನ್। ಕನ್ನಾಡಿಪೋಲ ಪುಡವೈ ಅಣಿಂದು ಪೆಣ್ಣಾಗ ಪಿರಂದದೈ। ಎಣ್ಣಿ ಮಗಿಳ್ ವೇನ್॥ ಭಕ್ತಿ ಕದೈಗಳೈ ಕೇಟ್ಪೇನ್। ಪಡಿಪ್ಪೇನ್ ಪಸುವೈ। ಪೇಣುವೇನ್ ಚೆಡಿಕೊಡಿ ವಳರ್ಪೇನ್। ಕಟ್ಟುಪಾಟ್ಟುಡನ್। ನಡಪ್ಪೇನ್। ನಾನ್ ನೀ ನಾಗರೀಗಂ ತೆರಿಯಾದ ಪಟ್ಟಿಕಾಡು॥ ನೀ ನಾಗರೀಗಂ ತೆರಿಂದುಂ ಮುಟ್ಟಾಳು॥ ನೀನುಂ ನಾನುಂ ಸಂಡೈ ಪೋಟ್ಟೋಂ। ವೇರಿಡತ್ತೈ ನೋಕ್ಕಿಡಾಮಲ್। ಅನ್‌ಬೋಡುಂ ಪಣ್‌ಬೋಡುಂ ಸೇಂದ್ರು। ನಲ್ಲವರಾಯ್ ವಾಂಳ್ದಿಡ ವಣಂಗಿಡುಮೋಮ್॥

### ಪರೀಕ್ಷೆ ಬರುವುದು ತಿಂಗಳ ಕೊನೆಯಲಿ

ಪರೀಕ್ಷೇ ಬರುವುದು ತಿಂಗಳ ಕೊನೆಯಲಿ ಖಾತ್ರಿಯಾಗಿತ್ತು। ಎಣ್ಣೆಯ ನುರಿಸಿದ ಓದಿನ ನಡುವೆ ನಿದ್ದೆಯು ಬಂದಿತ್ತು। ಝೋಂಪಿನ ನಿದ್ದೆಯು ಬಂದಿತ್ತು॥1॥ ಮಾವನ ಮನೆಯಲಿ ಕಟುತರ ಬೈಗಳ ಸುರಿಮಳೆ ಸುರಿದಿತ್ತು। ಬಾಗಿಲ ಮೇಲ್ಗಡೆ ಬಿಳಿಯ ನಾಮದ ಪಟ್ಟೆಯು ಬಂದಿತ್ತು। ಕೆಳಗಡೆ ನಾಳೆಯು ಬರೆದಿತ್ತು॥2॥ ಸುಳ್ಳೆಲೆ ಹುಟ್ಟಿದ ಕೂಗುಮಾರಿಗೆ। ಸ್ವಾಗತ ನೀಡಿತ್ತು। ಘಮಘಮಿಸುವ ಕ್ಯಾಪ್ಟನ್ ಊದುಬತ್ತಿಯ ಬೂದಿಯು ಬಿದ್ದಿತ್ತು। ಮಾರಿಗೆ ಪೆಂಗನು ಬಳಿದಿತ್ತು॥3॥ ಚಟ್ಟನೆ ಏಳಿಸೆ ಅಲಾರಂ ಕ್ಲಾಕದು ಎಚ್ಚರ ಕೂಗಿತ್ತು। ಮೆತ್ತನೆ ಹಾಸಿದ ದಿಂಬಿನ ಅಂಚಲಿ ಪುಸ್ತಕ ತೆರಿದಿತ್ತು। ಪೆನ್‌ಸಿಲ್ ಅಲ್ಲೆ ಮಲಗಿತ್ತು॥4॥ ಏರುತ ಇಳಿಯುತ ಬಂದರು ಮಾವನು ದೂರದ ಊರಿಂದ। ಕಂಡರು ಭಂಡನ ನಿದ್ದೆಯ ಭೋಗದಿ ಓದುವ ಧನಿಯಿಲ್ಲ। ಪಾಸದು ಹಣೆಯಲಿ ಬರೆದಿಲ್ಲ॥5॥ ಬಿಸಿಬಿಸಿ ಕಾಫಿಯ ಬಟ್ಟಲು ತಂದಳು ಅಕ್ಕರೆಯಲಿ ಮಡದಿ। ಇಂತೆದಳು ನಾಥನು ಎದ್ದಿಲ್ಲ। ಮಡದನು ನಿದ್ದೆಯ ತಬ್ಬಿದ॥6॥ ಬೆಳಗಾಯಿತ ಸರಿಹೊರಡಲಿ ಎಂದರು ಮಾವನು ಕೋಪದಲಿ। ಒಳಮನೆಯಲಿ ಕುಡಿದಾಯಿತು ಎಂದಳು ನಾದಿನಿ ರಾಗದಲಿ। ಗುಡಿಸಲು ಬಂದನು ಪೊರಕೆಯ ಹಿಡಿಯುತ ಬೋರನು ಕೋಣೆಯಲಿ॥7॥

### ಪೋರಿ ನಿನ್ನ ನೋಡಲಿಕ್ಕ ರಾಗ: ಬೃಂದಾವನಸಾರಂಗ

ಪೋರಿ ನಿನ್ನ ನೋಡಲಿಕ್ಕ ಯಾರೋ ಏನೋ ಬರ್ತಾರಂತ ಹುಬ್ಬಳ್ಯಾಗ ಇದಾರಂತ ಕಾರಿನ್ಯಾಗ ಬರ್ತಾರಂತ॥1॥ ಹೂವ್ವ

ಹಣ್ಣು ತರುತಾರಂತ। ಮಂಗಳವಾರ ಬರ್ತಾರಂತ। ಭಾರಿ ದೊಡ್ಡ ಸಾಹುಕಾರಂತ। ಹೊಲಮನೆ ಏನಿಲ್ವಂತ।।2।। ರೂಪಿನಾಗ ರಾಮನಂತ। ಶಕ್ತಿಯಾಗ ಭೀಮನಂತ। ಬಣ್ಣ ಬಹಳ ಬೆಳ್ಳಗಂತ। ಕಣ್ಣು ಮಾತ್ರ ಮೆಳ್ಳಗಂತ।।3।। ಮೂರು ಮಜಲಿ ಮನೆಯಂತ। ಕಾಲುಮಾತ್ರ ಒಂದೈತಂತೆ। ಸಿಟ್ಟಿನೊಳಗ ಸೈನಿಕನಂತೆ। ಜೈಲಿಗ್ಹೋಗಿ ಬಂದಾನಂತೆ।।4।। ಜೂಜು ಗೀಜು ಆಡೋಲ್ವಂತೆ। ಬೀಡಿ ಸಿಗರೇಟ್ ಸೇದೋಲ್ವಂತೆ। ತೂರಾಡ್ತಾಮಾತ್ರ ನಡಿತಾನಂತೆ। ಗೋವಾ ಬ್ರಾಂದಿ ಹಿಡಿತಾನಂತೆ।।5।। ಮನೆ ಮುಂದ ತೋಟೈತಂತ। ಭಾವಿ ಮಾತ್ರ ಮೋಟೈತಂತ। ನೀರು ಮಾತ್ರ ಬತ್ತೈತಂತ। ಜಾಲಿಮುಳ್ಳು ಬೆಳೆದೈತಂತ।।6।। ಬಿ.ಎ.ಎಮ್.ಎ ಮಾಡ್ಯಾನಂತ। ಇಂಗ್ಲೀಷ್ ಮಾತ್ರ ಬರಲ್ವಂತ। ನೌಕರಿಯೊಂದ ಹಿಡಿದಾನಂತ। ಮುನಿಸಿಪಾಲ್ಟಿ ಸರ್ವೆಂಟಂತ।।7।। ಆಕಳ ಹಸು ಬಹಳೈತಂತ। ಇಪ್ಪತ್ತೆರಡೂ ಆಕಳೈತಂತ। ಬಂಜೆ ರೋಗ ಹಿಡಿದೈತಂತ। ಪೌಡರ್ ಹಾಲು ಕುಡಿತಾರಂತ।।8।।

### ಬಚ್ಚಲು ಮನೆಯಾ ನಲ್ಲಿಯ ರಾಗ: ಮೋಹನ

ಬಚ್ಚಲು ಮನೆಯಾ ನಲ್ಲಿಯ ನೀರನು ತೊಟ್ಟಿಗೆ ಹೊಯ್ದಾ। ಬಕೆಟ್ಟಿಗೆ ಹೊಯ್ದಾ। ಬಾಗಿಲು ತೆರೆದು ನೀರದು ಹರಿದು। ರೋಡೆಲ್ಲಾ ತೊಯ್ದು ಹೋಯ್ತು ರೋಡೆಲ್ಲಾ ತೊಯ್ದು ಹರಿದು।।1।। ಮೂಗಲಿ ತೂರುವ ದೋಸೆಯ ವಾಸನೆ ಚರಚರನೆ ಕೂಗಿ। ತಾವೆ ಚರಚರನೆ ಕೂಗಿ। ಘಮ ಘಮ ಘಮಿಸುವ ಕಾಫಿಯ ರುಚಿಯು। ಬಾಯಿಗೆ ಹಾಯಾಗಿ। ತಾವೆ ಗಂಟಲಿಗೆ ತಾಗಿ।।2।। ಟೇಬಲ್ ಮೇಲೆ ತಟ್ಟೆಯ ಒಳಗೆ ತಿಂಡಿಗಳ ದಂಡು। ಕಂಡಿತು ತಿಂಡಿಗಳ ದಂಡು। ಯಾರಿರಿಸಿಹರು ಅಡಿಗೆ ಮನೆಯಿಂದಿಲ್ಲಿಗೆ ತಂದು।।3।। ಈಗ ಇಲ್ಲಿಗೆ ತಂದು? ಬಿಸಿ ಬಿಸಿ ಮಸಾಲೆ ತಟ್ಟೆಯೊಳಿರಿಸಿ ಬೆಣ್ಣೆಯಾ ಸವರಿ। ಚಟ್ನಿ ಬೆಣ್ಣೆಯಾ ಸವರಿ। ತಟ್ಟೆಯೊಳಿಂದ ಹೊಟ್ಟೆಗೆ ಹೋಗಲು ಮೈಯೆಲ್ಲಾ ಬೆವರಿ। ಹೋಯಿತು ಹಸಿವೆಲ್ಲೋ ಹಾರಿ।।4।। ಅಡಿಗೆ ಕೋಣೆಲಿ ಥಣಥಣವೆನುತಲಿ। ಚಮಚಗಳ ಹಾಡು। ಹೊರಟಿತು ಚಮಚಗಳ ಹಾಡು। ನಾನಾ ಶಬ್ದದ ಸಾಗರವಾಯಿತು। ಹೋಟಲಿನಾ ಬೀಡು ಕ್ಷಣದಲಿ ಹೋಟಲಿನಾ ನಾಡು।।5।। ಕಂಡಿತು ಕಣ್ಣು ಸವಿದಿತು ನಾಲಿಗೆ ಕೊಟ್ಟಿತು ಈ ಕೈಯಿ। ಬಿಲ್ಲನು ಕೊಟ್ಟಿತು ಈ ಕೈಯಿ। ಕೇಳಿತು ಕಿವಿಯು ರೇಡಿಯೊ ಹಾಡು। ಹೊತ್ತಿಸಿ ಕೈ ಬೀಡಿ। ಮಿಕ್ಕಿದ ಚಿಲ್ರೆಗೆ ಕೈ ನೀಡಿ।।6।। ಅರಿಯದು ರೀತಿ ತಿಳಿಯದು ನೀತಿ। ಕಾಣದೋ ದಾರಿ। ಕಣ್ಣಿಗೆ ಕಾಣದೇ ದಾರಿ। ಹೊಟ್ಟೆಯ ಹಸಿವಿಗೆ। ಹೆಚ್ಚಲು ಧಗೆ। ಇದುವೆ ಉಪಕಾರಿ। ಇದು ಬರಿ ಹೋಟಲು ಅಲ್ಲಾರಿ।।7।।

### ಬರ್ತೀರಾ ಬರ್ತೀರಾ ಮದುವೆಗೆ ಬರ್ತೀರಾ

ಬರ್ತೀರಾ ಬರ್ತೀರಾ ಮದುವೆಗೆ ಬರ್ತೀರಾ ಬರ್ತೀರಾ? ಮಾಳಿಗೆ ಮನೆಯ ಮಾಲಮ್ನೋರೆ। ಸಂದಿಯ ಮನೆಯ ಸುಗುಣಮ್ನೋರೆ। ಸಾಲ ಕೇಳುವ ಸುಂದರಮ್ನೋರೆ। ಸಾವಿರ ಸುಳ್ಳಿನ ಸರಸಮ್ನೋರೆ। ಬರ್ತೀರಾ ಬರ್ತೀರಾ?।।1।। ಮೋಟು ಜಡೆಯ ಮುತ್ತಮ್ನೋರೆ। ಮೆಳ್ಳುಗಣ್ಣಿನ ರತ್ನಮ್ನೋರೆ। ಡೊಂಕು ಮೂಗಿನ ಸುಬ್ಬಮ್ನೋರೆ। ಒಂಟಿ ಕತ್ತಿನ ವೆಂಕ್ಟಮ್ನೋರೆ। ಬರ್ತೀರಾ ಬರ್ತೀರಾ।।2।। ಬಡಾಯಿ ಕೊಚ್ಚುವ ಭಾಗ್ಯಮ್ನೋರೆ। ಜಂಭಗಾತಿ ಜಲಜಮ್ನೋರೆ। ಹರಕು ಬಾಯಿನ ವನಜಮ್ನೋರೆ। ಮರೆಯದೆ ಬನ್ನಿರಿ ಲಗ್ನಕೆ ಬೇಗಾ ಬರ್ತೀರಾ ಬರ್ತೀರಾ।।3।। ಬರ್ತೀವಿ ಬರ್ತೀವಿ ಲಗ್ನಕೆ ನಾವೂ ಬರ್ತೀವಿ ಬರ್ತೀವೀ। ಕೋಡುಬಳೆ, ಒಳ್ಳೆ ಎಳ್ಳಿನ ಪುಡಿಯ ಚಿತ್ರಾನ್ನ, ಲಾಡು, ಚಿರೋಟಿ, ಮಸಾಲೆ ವಡೆಯಾ, ಸಕ್ಕರೆ ಹೋಳಿಗೆ ಸಂಡಿಗೆ ಖೀರೂ। ಚೊಕ್ಕವಾಗಿ ನಾವ್ ತಿಂದು ಬರೋಣಾ, ಬರ್ತೀವಿ, ಬರ್ತೀವೀ।।4।। ಕಾಶೀಹಲ್ವಾ, ಬಾದಾಮಿ ಹಲ್ವಾ, ಜಾಮೂನು, ಜಿಲೇಬಿ ಜಹಂಗೀರನ್ನೂ ಐಸ್‌ಕ್ರೀಮ್, ಫ್ರೂಟ್‌ಸಾಲಡ್, ಬೇಕಾದಷ್ಟು ತಿಂದು ತೇಗಲು ಬರ್ತೀವಿ ಬರ್ತೀವಿ।।5।।

### ಬಾರೆ ರಾಜಕುಮಾರಿ ನಾವು

ಬಾರೆ ರಾಜಕುಮಾರಿ ನಾವು ಹೋಗೋಣ ಜಂಬೂಸವಾರಿ। ಹೋಗೋಣ ಜಂಬೂಸವಾರಿ ನಮ್ಮ ಹಳೆಯ

ಸ್ಕೂಟರನ್ನೇರಿ॥1॥ ಬಾರೊ ರಾಜಕುಮಾರ ನಿನ್ನ ಹಣದ ಥೈಲಿಯನ್ನು ತಾರಾ। ಹಣದ ಥೈಲಿಯನು ತಾರಾ, ಕೊಂಡು ತರೋಣ ಇಡೀ ಬಜಾರಾ॥2॥ ಬಸ್ಸು ಕಾರುಗಳ ದೀಪ ಆಟೋಗಳ ಆಟಾಟೋಪ ಎಲ್ಲೆಡೆ ಹಾರನ್ ಅಬ್ಬರ ಸ್ವಾಗತಿಸಿದೆ ನಮ್ಮಿಬ್ಬರ। ಸೇಬು ನನಗೆ ಬಹಳ ಇಷ್ಟ। ಅದು ಬರೀ ಸಕ್ಕರೆ ಪಿಷ್ಟ॥3॥ ಆಹಾ ಸೀಡಲೆಸ್ ದ್ರಾಕ್ಷಿ ಹುಳಿಗೊಜ್ಜು ಚಿನ್ನ ಕಾಣೆ ನಳಿನಾಕ್ಷಿ। ಕೊಳ್ಳೋಣವೆ ಹಸಿರು ಬಟಾಣಿ, ಅದು ದುಬಾರಿಯಲ್ಲವೆ ರಾಣಿ॥4॥ ಒಗ್ಗರಣೆಗೆ ತುಪ್ಪವಿಲ್ಲ। ಪಾಮಾಯಲ್ ಇದೆಯಲ್ಲ। ಎಂದು ಕಟ್ಟೋದ್ ಬಂಗಲೆ? ಲಾಟರಿ ಹೊಡೆಯಲಿ ಕೂಡಲೆ॥5॥ ಎಂದು ಹಾರೋದ್ ಪ್ಲೈನಿನಲ್ಲಿ। ತಪ್ಪಲಿ ಹೈಜಾಕ್ ಹಾವಳಿ। ಕೊಳ್ಳಲೆ ರೇಶಿಮೆಸೀರೆ ತಕ್ಕೊಳ್ಳಲೆ ಚಿನ್ನದ ಒಡವೆ। ರೇಶಿಮೆ ನನಗಲರ್ಜಿ ನಮಗೇತಕೆ ಚಿನ್ನದ ಮರ್ಜಿ॥6॥ ಬೇಡವೆ ಬಣ್ಣದ ಟಿ.ವಿ. ಅದು ಮೂರ್ಖರ ಪೆಟ್ಟಿಗೆ ದೇವಿ। ಹೋಗಲಿ ನೋಡೋಣ ಸಿನಿಮಾ ಕ್ಯೂ ನಿಲ್ಲುವುದು ಎಲ್ಲಿಯ ಕರ್ಮ॥7॥ ಏನದು ಗುಂಡಿನ ಸದ್ದು? ಯಾರು ಹಾಗೆ ಚೀರಿದ್ದು ಎಲ್ಲೋ ಗಲಭೆ ಸ್ಟ್ರೈಕು ಬೇಗ ಇಲ್ಲಿಂದ ಪಾರಾಗಬೇಕು॥8॥ ಸಾದಾ ದೋಸೆಯ ತಿಂದು ಬೈಟೂ ಕಾಫಿ ಕುಡಿದು ಜುಂ ಅಂತ ಮುಗಿಯಿತು ಜಂಬೂಸವಾರಿ। ಇನ್ನು ಬಾಡಿಗೆ ಮನೆಕಡೆ ದಾರಿ॥9॥ ಬಾರೋ ರಾಜಕುಮಾರ ಆಹಾ ಬಾರೋ ನನ್ನ ಕುಬೇರಾ। ಬಾರೇ ರಾಜಕುಮಾರಿ ಐಯಾಮ್ ರಿಯಲಿ ವೆರಿಸಾರಿ॥10॥

### ಬಿಟ್ಟರೇ ಮಾಫಿಂಗು ಜುಟ್ಟುಗಳ — ರಾಗ: ಆನಂದಭೈರವಿ

ಬಿಟ್ಟರೇ ಮಾಫಿಂಗು ಜುಟ್ಟುಗಳ ಶೇವಿಂಗ್। ತಲೆಮೇಲೆ ಕ್ರಾಫಿಂಗು ತರಹವಾರಿ। ಎಸ್ಸು ನೋ ಟಾಕಿಂಗು ಯಾವಾಗಲು ಶೋಕಿಂಗು। ಮೈನ್ ರೋಡಿಲ್ ವಾಕಿಂಗು ರಾಗ ಸಿಂಗಿಂಗ್॥1॥ ಸಾರಾಯಿ ಡ್ರಿಂಕಿಂಗ್ ರೋಡಿನಲ್ಲಿ ರೋಲಿಂಗ್। ಪಬ್ಲಿಕ್ಕಲ್ ಫೈಟಿಂಗ್ ಶಾಪಿಗೆ ಗೋಯಿಂಗ್। ಸುಜನ ಬ್ಲೇಮಿಂಗ್ ಮನೆಗೆ ಬರುವುದು ಮಾರ್ನಿಂಗ್। ಕಷ್ಟವ್ಯಸನಗಳೆಲ್ಲ ಮನೆಯಲ್ಲಿ ಸ್ಟಾರ್ಟಿಂಗ್। ಕಡೆಗೆ ಕೂಳಿಗೆ ಬ್ಲಾಕಾಗಿ ಕಷ್ಟ ಸಫರಿಂಗ್॥2॥

### ಬುಟ್ಟಾ ಗಾಡಿನಂಬೋರಣ್ಣ

ಬುಟ್ಟಾ ಗಾಡಿನಂಬೋರಣ್ಣ ಎಕ್ಸಿಬಿಷನ್‌ಗೆ। ಹಳ್ಳಿ ಬೋರಿ ಉಡೋಕ್ ಜಾರ್ಜೆಟ್ ಸೀರೆ ತರಾಕೆ। ಕಿವಿಗೆರಡು ತಗ್ಡಿನ ಲೋಲಾಕ್ ತಗಲ್ಸ್‌ಕೋಳ್ಳಾಕೇ॥ ಹೊಂಟಾ ಬಂಟಾ ನಂ ಬೋರಾ ಎರಡಾಣೆ ಟಿಕೆಟ್ ತಕ್ಕಂಡು॥1॥ ಮರಿ ಕರ್ಕೊಂಡ್ ಹೋದ ಬೋರ ಬೆಲೂನ್ ಅಂಗ್ಡೀಗೆ। ಮರಿ ಕೇಳ್ದ ಅಪ್ಪ ನನಗೊಂದ್ ಬೆಲೂನ್ ಊದಾಕೆ॥ ಬೋರ ಕೊಟ್ಟ ಬಿಲ್ಲೆಗ್ಮೂರು ಬೆಲೂನ್ ಊದಾಕೆ। ಮರಿ ಟಪ್‌ಟಪ್ ನೇ। ಮಂಕಾಗಿ ಕುಂತ ಜಪ್ನೆ॥2॥ ನಗ್ತಾ ನಗ್ತಾ ನಗ್ತಾ ಬಂದಾ ಜವಳೀ ಅಂಗಡಿಗೇ॥ ಅಂಗ್ಡಿಯವರು ಒಳಕ್ ಹೋದ್ರೆ ತಮಾಷೆ ಮಾಡ್ಬುಟ್ರು। ಮಾರ್ನಿಂಗ್ ಸಾರಿ ಈವ್ನಿಂಗ್ ಸಾರಿ ಜಾರ್ಜೆಟ್ಟು ಅಂತ ಸಾಕಪ್ಪ ಸಾಕು ದುಡ್ಡಿಲ್ಲಾ ಮನೆಗ್ಹೋದ್ರೆ ಬೋರಿಬಿಟ್ಟಾಳಾ॥3॥ ರಾಜ ಇಸ್ನೋ ಅಂಗ್ಡೀಗ್ ಬಂದ ಮರಿಜೊತೇಲಿ ವಾಸ್ನೇ ಗೀಸ್ನೆ ನೋಡ್ಕೊಂಡ್ ಗೀಡ್ಕೊಂಡ್ ಬಾಯ್ ಬಾಯ್ ಬಿಟ್ಕೊಂಡ್ ಬೋರಿಗೇಕೆ ರಾಜ ಇಸ್ನೋ ದಮ್ಮಯ್ಯ ಬೇಡ। ಸಾಕಪ್ಪಾ ಸಾಕು ದುಡ್ಡಿಲ್ಲಾ ಮನೆಗ್ಹೋದ್ರೆ ಬೋರಿ ಬಿಟ್ಟಾಳಾ?॥4॥ ನಗ್ತಾ ನಗ್ತಾ ನಗ್ತಾ ನಗ್ತಾ ನೋಡ್ದ ನಗೋ ಬೊಂಬೇನಾ। ಮರಿ ಹೆದ್ರಿ ಅಪ್ಪನ್ ತಬ್ಕೊಂಡ್ ಅಳ್ತಾ ಇದ್ದಾಗಾ। ಬೋರ ನಗ್ದು ಕೈ ಕೈ ಮುಗ್ದು ಅಡ್‌ಬಿದ್‌ಬುಟ್ಟಾ। ನಗೋದ್ ನಿಲ್ಸಿಬಿಡಪ್ಪ ಬೊಂಬೆರಾಯ। ಮುದ್ದುಮರಿ ಅಳ್ತಾವ್ನೆ॥5॥ ಸುತ್ತಿ ಸುತ್ತಿ ಸಾಕಾಗ್ ಬಂದ ಬಿಸ್ಕತ್ ಅಂಗ್ಡೀಗೆ। ರಾಗಿ ಬಿಸ್ಕತ್ ಶ್ಯಾಂಪಲ್ ರುಚಿ ನೆತ್ತಿಗೇರ್ಬಿಡ್ತು। ಮರಿಕಾಟ ತಡಿಲಾರ್ದೆ ಒಸಿ ಕೊಂಡ್ಕೊಂಡಾ। ಸಾಕಪ್ಪ ಸಾಕು ಮರಿ ಕಾಟ ಮರಿ ಆಡಿದ್ದೇ ಆಟ॥6॥

### ಭಲಾ ಭಲಾರೆ ಭಲ್ — ರಾಗ: ಕಲಾವತಿ

ಭಲಾ ಭಲಾರೆ ಭಲ್ ಭಲ್ ಹಣದ ಗಂಟು ನೋಡು ಫಲ್ ಫಲ್॥ಪ॥ ಚಿನ್ನದ ಕುಡಿಕೆ ರನ್ನದ ಮಡಿಕೆ। ಹಿತ್ತಾಲ ಬಾಗಿಲಿಗೆ ಮುತ್ತಿನ ತಡಿಕೆ॥1॥ ಕೈಯಾಗೆ ಉಂಗುರ ಕಾಲಗೆ ಗಗ್ಗುರ। ಕೇರಿ ಕೇರಿಯೊಳಗೆ ಹಾಕುವೆ ಡಂಗುರ॥2॥

### ಮನಸ್ಸಿನಲ್ಲಿ ಕೋಪವನ್ನು

ಮನಸ್ಸಿನಲ್ಲಿ ಕೋಪವನ್ನು ಮಾಡಬೇಡೀ ನಾನು ನಿಮ್ಮನು ಬಹಳವಾಗಿ ಬೇಡೋದಿಲ್ಲ॥ಪ॥ ಕಾಲಿಗೊಂದು ಹವಾಯ್ ಚಪ್ಪಲಿ ಅಷ್ಟೇಸಾಕೂ। ಅದಕ್ ತಕ್ಕಂತೆ ನೈಲೆಕ್ಸ್ ಸೀರೆ ತರಲೇ ಬೇಕು॥1॥ ಕೈಗೆ ಎರಡು ಚಿನ್ನದ ಬಳೆ ಅಷ್ಟೇ ಸಾಕೂ। ಅದಕ್ ತಕ್ಕಂತೆ ರಿಸ್ಟ್ ವಾಚ್ ತರಲೇಬೇಕು॥2॥ ಕಿವಿಗೊಂದು ವಜ್ರದ ಓಲೆ ಅಷ್ಟೇ ಸಾಕು। ಅದಕ್ ತಕ್ಕಂತೆ ವಜ್ರದ ಜುಮುಕಿ ತರಲೇಬೇಕು॥3॥ ತಲೆಗೊಂದು ಹೇರಾಯಿಲ್ ಅಷ್ಟೇ ಸಾಕು। ಅದಕ್ ತಕ್ಕಂತ ಕುಚ್ಚು ರಿಬ್ಬನ್ ತರಲೇಬೇಕು॥4॥ ನಾನು ನೀವು ವಾಕಿಂಗಿಗೆ ಹೋಗಲೇ ಬೇಕು ನಾನು ಅಲ್ಲಿ ಸುಸ್ತಾದ್ರೆ ಮೋಟರ್‌ಗಾಡಿ ತರಲೇ ಬೇಕು॥5॥ ನಾನು ನನ್ನ ತವರಿಗೆ ಹೋಗಲೇ ಬೇಕು। ನೀವು ನನ್ನ ಹಿಂದೆ ಟ್ರಂಕು ಬೆಡ್ಡು ತರಲೇ  ಬೇಕು॥6॥

### ಮಾಟಗಾತಿ ನಮ್ಮತ್ತೆ (ಸಂಭಾಷಣಾಗೀತೆ)

ಮಾಟಗಾತಿ ನಮ್ಮತ್ತೆ ರಾಟೆ ಎಲ್ಲಿಟ್ಟೆ? ರಾಟೆ ಓಡಿಹೋಗುತ್ತೇಂತ ಕೈಕಾಲು ಮುರಿದಿಟ್ಟೆ॥1॥ ಮಾಟಗಾತಿ ನಮ್ಮತ್ತೆ ದೀಪ ಎಲ್ಲಿಟ್ಟೆ? ದೀಪ ಆರಿಹೋಗುತ್ತೇಂತ ಸೂರ್‍ನಲ್ಲಿ ಬಚ್ಚಿಟ್ಟೆ॥2॥ ಮಾಟಗಾತಿ ನಮ್ಮತ್ತೆ ಸುಣ್ಣ ಎಲ್ಲಿಟ್ಟೆ? ಸುಣ್ಣ ಒಣಗಿ ಹೋಗುತ್ತೇಂತ ಗೋಡೆಗೆ ಬಳಿದ್ಬಿಟ್ಟೆ॥3॥ ಮಾಟಗಾತಿ ನಮ್ಮತ್ತೆ ಎಲೆ ಎಲ್ಲಿಟ್ಟೆ? ಎಲೆ ಒಣಗಿ ಹೋಗುತ್ತೇಂತ ಒಲೆಯಲಿ ಮುಚ್ಚಿಟ್ಟೆ॥3॥ ಮಾಟಗಾತಿ ನಮ್ಮತ್ತೆ ಗಂಡನ್ನ ಎಲ್ಲಿಟ್ಟೆ? ಗಂಡ ದಂಡಿಗೆ ಹೋಗ್ತಾನೆಂದು ಗುಂಡಿಲಿ ಬಚ್ಚಿಟ್ಟೆ।॥4॥

### ಮೋಸ ಹೋದೆನು ಸಾಲಮಾಡಿ — ರಾಗ: ಮಧ್ಯಮಾವತಿ

ಮೋಸ ಹೋದೆನು ಸಾಲಮಾಡಿ। ಸಾಲ ಮಾಡಿ॥ಪ॥ ದಿಗಿಲು ದೀಗಿಲು ಎನ್ನುತ್ತಲ್ಲಾ। ಎನ್ನುತ್ತಲ್ಲಾ। ಬಗೆ ಬಗೆ ಮಾತನಾಡುವರೂ ಎಲ್ಲಾ। ನಗುವೊರು। ಊರೋಳಗೆಲ್ಲಾ। ಜನರೆಲ್ಲಾ। ಅಣ್ಣತಮ್ಮಿಂದಿರಿಗೆ ಹಗೆಯಾದೆನಲ್ಲಾ॥1॥ ಏನು ಮಾಡಲಿ ಜಗದಾಂಬಾ। ಜಗದಾಂಬಾ। ಎನ್ನ ಮಾನವ ಕಾಯಬೇಕೆ ನಿಜವೇ ಮೂಕಾಂಬಾ। ಮಾನೂನೀಯರ ಮಾತು ತುಂಬಾ ಮಾತು ತುಂಬಾ॥2॥

### ಯಾಕ್ಲಾ ಪುಟ್ನಂಜ ಇಂಗಾಗ್ ಬುಟ್ಟೆ — ರಾಗ: ಶಂಕರಾಭರಣ-ನೋಟ್

ಯಾಕ್ಲಾ ಪುಟ್ನಂಜ ಇಂಗಾಗ್ ಬುಟ್ಟೆ। ಯಂಗಿದ್ದೇ ನೀ ಯಂಗಾಗ್ಬುಟ್ಟೆ॥ಪ॥ ಶೆಟ್‌ರಂಗ್ಡೀಗ್ ಓಗಿ ತೆಲುಗಲ್ ಮಾತಾಡ್ತೀಯ। ಉಪ್ಪೆಟ್ಲ ಶೆಟ್‌ವಾಳ್ಳು ಅಂತ ಕೇಳ್ತೀಯ। ಉಪ್ಪಾ-ಪಪ್ಪಾ ಅಂದ್ರೆ ನೀನು ಪೆಚ್ಚಾಗ್ತೀಯ। ಅರ್ಥವಾಗ್ದೆ ಪಪ್ಪಂದ್ರೆ ಏಮಿ ಅಂತೀಯಾ। ಕನ್ನಡ್‌ದಾಗೆ ಕೇಳಿದ್ರೆ ಕೊಡಕ್ಕಿಲ್ಲ ಅಂತಾನ್ಯೆ। ನೀನೆ ಆಡ್ದೆ ನಿನ್ ಬಾಸೇನ ಅವನ್ ತಾನೆ ಕಲ್ತಾನ್ಯೆ। ನಿನ್ ಬಾಸೇನ್ ನೀನ್ ಆಡೋಕೆ ನಿಂಗವಮಾನ್ವೆ॥1॥ ಕೂಲೀನ್ ಕರೆಯೋಕ್ ಓದಾಗ ನೀನು ತಮಿಳಲ್ ಏಳ್ತೀಯ। ಇಂದು ಮೂಟೆ ತೂಕುರ್‍ತುಕ್ಕು ಎನ್ನ ತರಣುಂ ಅಂತೀಯ। ತೊನ್ನೂರು ಪೈಸ ತರಣುಂ ಅಂದ್ರೆ ಅರ್ಥ ಕೇಳ್ತೀಯ। ಅರಕೊ ಮುರುಕೊ ತಮಿಳಲ್ಲಿ ಏಳೋಕ್ಹೋಗ್ತೀಯ। ಕನ್ನಡದಲ್ಲೆ ಕರದ್ರೆ ಬರಕ್ಕಿಲ್ಲ ಅಂತಾನ್ಯೇ? ಅವನ್ ಬಾಸೇನ್ ನೀನ್ ಆಡ್ಡೆ ನಮ್ ಬಾಸೆ ಕಲ್ತಾನ್ಯೆ। ನಿನ್ ಬಾಸೇನ್ ನೀ ಆಡೋಕೆ ನಿಂಗವಮಾನ್ವೆ॥2॥ ಜಟಕಗಾಡಿ ಬೇಕಾದ್ರೆ ಉರ್ದೂಲ್ ಕೂಗ್ತೀಯ। ಚಾಮರಾಜ್ ಪೇಟ್‌ಕು ಕ್ಯಾದೇನಾ ಬೋಲೋ ಅಂತೀಯಾ। ಅಡಾಯ್ ರೂಪಾಯ್ ದೇನಾ ಅಂದ್ರೆ ಕಣ್ ಕಣ್ ಬುಡ್ತೀಯಾ। ಎಂಗೋ ಏನೋ ಅರ್ಥವಾಗದಿದ್ರು ಆಡೇ ಆಡ್ತೀಯಾ। ಕನ್ನಡದಾಗೆ ಕರೆದ್ರೆ ಬರಕ್ಕಿಲ್ಲ ಅಂತಾನ್ಯೆ? ನಿನ್ನ್ ನೆಚ್ಕೊಂಡು ಈ ಊರ್‍ನಾಗ್ ಅವನ್ ಬದುಕು ನಡೆಸವ್ನೆ॥ ನಿನ್ ಬಾಸೇನ್ ನೀನ್ ಆಡಾಕ್ ನಿಂಗವಮಾನ್ವೆ?॥3॥ ಇನ್ ಇಂಗ್ಲೀಸಂತೂ ಸರೇಸರಿ ಆಡೇ ಬುಡ್ತೀಯ। ಎಸ್.ನೋ. ಥ್ಯಾಂಕ್ಯು ಈ ಮೂರು ಕಲ್ತೇ ಇದ್ದೀಯ। ರಾಜ್‌ಕುಮಾರ್ ಆಕ್ಟಿಂಗ್ ಎಂಗೆ ಅಂತ ಕೇಳ್ತೀಯ। ಚಿತ್ರ ಎಂಗೆ ನಟನೆ ಎಂಗೆ ಅನ್ನಕ್ ನಾಚ್ತೀಯ। ಕನ್ನಡ ಪದಗಳ್ ಬಳಸ್ದೇನೆ ಬಾಸೆ ಬಲ್ತು ಬೆಳೆದಾತ? ನಾವ್ ನಾವ್ ಸೇರಿ ಮಾತಾಡೊಕ್ಕೂ

ಇಂಗ್ಲೀಷ್ ಬೆರೆಸ್ಲೆ ಬೇಕೈತಾ? ನಿನ್ ಬಾಸೆ ನೀನ್ ಆಡೋಕೆ ನಿಂಗವಮಾನ್ವೆ।।4।।

### ರಾಮ3 ಬೀಗಿತ್ತಿ ಜಾಣೆ

ರಾಮ ರಾಮ ರಾಮ ಅಹಹಾಹಾ ಆಹಾ। ಬೀಗಿತ್ತಿ ಜಾಣೆ ಬೀಗಯ್ಯ ಕೋಣ।।ಪ।। ಬೀಗಿತ್ತಿ ಮಲಗೋದು ಮಂಚದಮೇಲೆ। ಬೀಗಯ್ಯ ಮಲಗೋದು ಜಗಲಿ ಮೇಲೆ।।1।। ಬೀಗಿತ್ತಿ ಕುಡಿಯೋದು ಕಾಫಿ ಟೀ ಕೋಕೋ।। ಬೀಗಯ್ಯ ಕುಡಿಯೋದು ನೀರು ಮಜ್ಜಿಗೆ।।2।। ಬೀಗಿತ್ತಿ ಹಚ್ಕೋಳೋದು ಸ್ನೋ ಪೌಡರ್। ಬೀಗಯ್ಯ ಹಚ್ಕೋಳೋದು ಒಲೆ ಬೂದಿ।।3।। ಬೀಗಿತ್ತಿ ಉಟ್ಕೊಳೋದು ರೇಷ್ಮೇಯ ಸೀರೆ। ಬೀಗಯ್ಯ ಉಟ್ಕೋಳೋದು ಖಾದಿ ಪಂಚೆ।।4।। ಬೀಗಿತ್ತಿ ಹೋಗೋದು ಕಾರಿನಲ್ಲಿ। ಬೀಗಯ್ಯ ಹೋಗೋದು ನಡಿಗೆಯಲ್ಲಿ।।5।। ಬೀಗಿತ್ತಿ ತಿನ್ನೋದು ಸಣ್ಣಕ್ಕಿ ಅನ್ನ। ಬೀಗಯ್ಯ ತಿನ್ನೋದು ರಾಗಿಮುದ್ದೆ।।6।। ಬೀಗಿತ್ತಿ ಮಾತಾಡೋದು ನಾಜೂಕಾಗಿ। ಬೀಗಯ್ಯ ಮಾತಾಡೋದು ಒರಟಾಗಿ।।7।। ಬೀಗಿತ್ತಿ ನೋಡೋದು ಕಳ್ಳನೋಟ। ಬೀಗಯ್ಯ ನೋಡೋದು ಓರೆನೋಟ।।8।। ಬೀಗಿತ್ತಿ ಕೆಪ್ಪಿ ಕೆಪ್ಪಿ। ಬೀಗಯ್ಯ ಮೂಗ ಮೂಗ।।9।।

### ವಾರ ಬಂತಮ್ಮ ರವಿವಾರ ರಾಗ: ಶ್ರೀ

ವಾರ ಬಂತಮ್ಮ ರವಿವಾರ ಬಂತಮ್ಮ। ರಾಯರ ಕರೆಯಮ್ಮ ಪತಿ ರಾಯರ ಕರೆಯಮ್ಮ।।ಪ।। ಎಲ್ಲ ಕೆಲಸ ಅವರಿಗೆ ವಹಿಸಿ ವಿಶ್ರಾಂತಿ ಪಡೆಯಿರಮ್ಮ।।1।। ಬೇಗ ಏಳಿಸಮ್ಮ। ತಿಂಡಿ ಕಾಫಿ ಮಾಡಿಸಮ್ಮ। ರುಚಿರುಚಿ ಅಡಿಗೆಯ ನಳರಾಯನುಣಿಸಿ ಬೇಸರವ ಕಳೆವನಮ್ಮ।।2।। ಮನೆಯ ತೊಳೆಸಿರಮ್ಮ। ಬಟ್ಟೆಯ ಅವರೆ ಒಗೆಯಲಮ್ಮ। ವಾರದಿಂದ ಕಲೆಹಾಕಿದ್ದೆಲ್ಲಾ ಕೊಳೆಯನು ಕಳೆವನಮ್ಮ।।3।। ಕೋಪ ಅರಿಯನಮ್ಮ ಗಂಡಿನ ಘನತೆ ತಿಳಿಯನಮ್ಮ। ಮಡದಿ ಮಾತಿಗೆ ತಲೆಯ ತೂಗುವ ಬಸವಣ್ಣ ಕಾಣಿರಮ್ಮ।।4।। ಹಿಂದೆ ಬರುವನಮ್ಮ ಮಕ್ಕಳ ಹೊರುವುದವನ ಕರ್ಮ ಮಡದಿ ಮಕ್ಕಳ ಸೇವೆಯಲ್ಲಿ ಬಾಳೆಲ್ಲ ಕಳೆವನಮ್ಮಾ।।5।।

### ಶಿವಪ್ಪ ಮೇಷ್ಟ್ರೇ ನೀವು (ಶಿವಪ್ಪ ಕಾಯೋತಂದೆ-ಧಾಟಿ)

ಶಿವಪ್ಪ ಮೇಷ್ಟ್ರೇ ನೀವು। ಮೂರು ಕ್ಲಾಸ್‌ಗೆ ಮೇಸ್ಟ್ರೇ ಗುರುವೆ। ಪಾಠವನ್ನು ಓದಲಾರೆ ಕ್ಷಮಿಸಲಾರಿರಾ।।ಪ।। ಪಾಠವಂತೆ ಲೆಖ್ಖವಂತೆ ಒಂದು ಅರಿಯೆನಾ। ಪೆನ್ನಂತೆ ಪುಸ್ತಕವಂತೆ ಕಾಣೆನಯ್ಯನಾ ಗುರುವೇ।।1।। ನಿಷ್ಠೆಯಿಂದ ಪಾಠ ಓದೇ। ಬರುವುದಂತೆ ಸಾರ್। ನಿಷ್ಠೆಯೋ ಅನಿಷ್ಠೆಯೋ ನಾಕಾಣೆ ಮೇಸ್ಟರೇ। ಸೈನ್ಸಂತೆ ಲೆಖ್ಖವಂತೆ ಒಂದು ತಿಳಿಯೆನಾ। ನೊಂದಬಾಲ ನೊಂದು ಬಾರಿ। ಪಾಸ್ ಮಾಡ್ಸಲಾಲಿರಾ ಗುರುವೇ।।2।।

### ಸದಾಶಿವ್ರಾಮರ ಪದವ ಹಾಡ್ತೀನಿ ರಾಗ: ಲಾವಣಿ

ಸದಾಶಿವ್ರಾಮರ ಪದವ ಹಾಡ್ತೀನಿ ಪಟಿಂಗ್ರ ಸಹವಾಸ ಮಾಡಬಾರದು। ಮಾಡಿದ್ರೆಮಾಡಿಕೊ ಮತ್ತೆ ಒಂದು ಹೇಳ್ತೀನಿ ಬೀಡಿ ಸಿಗರೇಟ್ ಮಾತ್ರ ಸೇದಬಾರದು।।ಗೌಡ ಶಾನುಭೋಗರ ಹೊತ್ತಿಲಿ ಹೊಲಮಾತ್ರ ಮಾಡಬಾರದು। ಮಾಡಿದ್ರೆ ಮಾಡಿಕೊ ಮಾತೊಂದು ಹೇಳ್ತೀನಿ ಬೇಲಿ ಹಾಕೋದು ಮಾತ್ರ ಮರೆಯಬಾರದು।। ಹೆಣ್ಣು ಗಂಡು ಒಂದೆ ಎಂದು ಗಂಡು ಹೆಣ್ಣು ಒಂದೆ ಎಂದು ಹೆಣ್ಮಕ್ಕ ಸಂಗಮಾತ್ರ ಮಾಡಬಾರದು। ಮಾಡಿದ್ರೆ ಮಾಡಿಕೊಳ್ಳಿ ಮತ್ತೆ ಒಂದು ಹೇಳ್ತೀನಿ ಏಕಾಂತ ಸಹವಾಸ ಮಾಡಬಾರದು।। ಹೆಣ್ಣುಮಕ್ಕಳು ಒಳ್ಳೆಯವರೆಂದು ಕಾಲೇಜಿಗವಳ್ನ ಮಾತ್ರ ಕಳ್ಸಬಾರದು। ಕಳ್ಸಿದ್ರೆ ಕಳಿಸಿಕೊ ಮತ್ತೆ ಒಂದು ಹೇಳ್ತೀನೀ। ಹಿಂದೆ ಕಾಯೋದು ಮಾತ್ರ ಮರೆಯಬಾರದು।। ನಿನ್ನ ಹೆಂಡತಿ ಒಳ್ಳೆಯವಳೆಂದು ತೌರೂರಿಗವಳ್ನ ಮಾತ್ರ ಕಳಿಸಬಾರದು। ಕಳ್ಸಿದ್ರೆ ಕಳ್ಸಿಕೊ ಮತ್ತೆ ಒಂದು ಹೇಳ್ತೀನಿ ಆಗಾಗ್ಗೆ ಹೋಗೋದ್ಮಾತ್ರ ಮರೆಯ ಬಾರದು।।

**ಸುಳ್ಳು ನಮ್ಮಲ್ಲಿಲ್ಲ** **ರಾಗ: ಪುನ್ನಾಗವರಾಳಿ**

ಸುಳ್ಳು ನಮ್ಮಲ್ಲಿಲ್ಲ ಆದ್ರೆ ಸುಳ್ಳೆ ನಮ್ಮನೆದ್ಯಾವ್ರು।। ಅಲ್ಲಿ ಸಾಸುವೆ ಚೆಲ್ಲಿದ್ದ ಕಂಡೆ। ಒಂದೊಂದಾ ನಾ ಆಯೋದ ಕಂಡೆ। ಮಾವಿನ ಕಾಯಿ ಕಂಡೆನಯ್ಯ ಮನೆಯ ಗಾತ್ರವ।।ಸು।। ಇಲಿಯು ಹಿಟ್ಟು ಕಲ್ಸೋದ್ ಕಂಡೆ। ಬೆಕ್ಕು ರೊಟ್ಟಿಯ ತಟ್ಟೋದ್ ಕಂಡೆ। ಮೆಣಸಿನಕಾಯಿ ಕಂಡೇನಯ್ಯ ಮನುಷ್ಯನ ಗಾತ್ರವ।।ಸು।। ನರಿಯು ನೇಗಿಲು ಬಡಿಯೋದ ಕಂಡೆ। ತೋಳ ತಂಬೂರಿ ನುಡಿಸೋದ್ ಕಂಡೆ। ಮೆಕ್ಕೆ ಕಾಯಿ ಕಂಡೆನಯ್ಯ ಕುಕ್ಕೆಗಾತ್ರವ।।ಸು।।

**ಸುರಾಂಗನೀ2 ಸುರಾಂಗನಿಕಮಾಲು**

ಸುರಾಂಗನೀ ಸುರಾಂಗನೀ ಸುರಾಂಗನಿಕ ಮಾಲು ಕಣವ್ವಾ। ಮಾಲು ಮಾಲು ಮಾಲು ಸುರಾಂಗನಿಕ ಮಾಲು ಸುರಾಂಗನಿಕ ಮಾಲು ಕಣವ್ವಾ।।ಪ।। ಊಟಿಯಿಲೆ ಮಾಮನುಕ್ಕು ಮಾಲೆಯಿಲೆ ವೀಡು। ಊಟಕುಳ್ಳೆ ಕುಳುರಡಿಚ್ಚ ವಿಸ್ಕಿಯ್ಯೆ ಪೋಡು।।1।। ಸೂರ್ಯಂ ಕೊಂಜಂಎರಿಂಜಿನಾಲ್ ಶ್ರದಿಯಿಲೆ ಪಾಡು। ಓಡಿಪೋಯಿ ಪೊಣ್ಣುಕಿಟ್ಟೆ ಡುಯಟ್ ಪಾಡು।।2।। ಅರಿಸಿ ಇರುಕು ಪರುಪ್ಪುಂ ಇರುಕು ಆಕ ಮುಡಿಯಿಲೆ। ಅಡುಪ್ಪು ಇರುಕು ನೆರುಪ್ಪು ಇರುಕು ಸೇಕ ಮುಡಿಯಲೆ।।3।। ಆಸೈಪಟ್ಟಾ ಎಲ್ಲಾತ್ತೇಯುಂ ಅಡಿಯ ಮುಡಿಯಿಲೆ। ಮಾಡಿವೀಟು ಅಕ್ಕಪೊಣ್ಣೇ ಪಾಕ ಮುಡಿಯಲೇ।।4।। ಒನ್ಸ್ ಮೈ ಪಪ್ಪಾ ಮೀಟ್ ಮೈ ಮಮ್ಮೀ ಅಂಡರ್ ಎ ಮ್ಯಾಂಗೋ ಟ್ರೀ। ಸೆಡ್ ಮೈ ಪಪ್ಪಾ ಡೂ ಮೈ ಮಮ್ಮೀ ವಿಲ್ಯೂ ಮ್ಯಾರಿ ಮೀ।।5।। ಒನ್ಸ್ ಮೈ ಸಿಸ್ಟರ್ ಕಲ್ಯಾಣಿ ವೆಂಟರಟು ಪಿಚ್ಚರ್ ಮಲೆಯಾಳಂ। ದೇರ್ ಶೀ ಸಾ ಎ ಪಂಜಾಬಿ ಈಟಿಂಗ್ ಮಟನ್ ಬಿರ್ಯಾನಿ।।6।। ಕೋಟ್ ಕೋಟ್ ಕೋಟ್ ಮೈ ಡಾರ್ಲಿಂಗ್ ಕೋಟ್ ಈಸ್ ನಾಟ್ ಎ ಜೋಕ್। ಇಫ್ ಯು ವಾಂಟ್ ಟು ಮೀಟ್ ಮೈ ಡಾರ್ಲಿಂಗ್ ಕಮ್ ಟು ಟೆನ್ನೀಸ್ ಕೋರ್ಟ್।।7।।

**ಸುಂದರ್‍ರಾಯನ ಇಹ ಸಂಸಾರ (ಲಾವಣಿ)**

ಸುಂದರ್‍ರಾಯನ ಇಹ ಸಂಸಾರ। ಹೇಳಲು ಹೊರಟರೆ ಬಲುವಿಸ್ತಾರ। ರಾಯನಿಗಿರುವುದು ಒಂದೇ ಕಣ್ಣು। ರಾಯರ ಹೆಂಡತಿ ಹಳ್ಳಿಯ ಹೆಣ್ಣು। ಆಡಿದ ಮಾತಿಗೆ ತಪ್ಪಿದಿಯೇಕೆ। ಕಾಣದ್ ಕೇಳಿದ್ ನಂಬಿಕೊರಗೋಕೆ। ಗೋಣಗೊಣ ಗುಟ್ಟುವವಳೀ ಮನೆಯಾಕೆ। ಅರಚೀ ಕಿರಚೀ ಪರಚಾಡೋಕೆ। ಬಡೆದೂಬಡಿದೂ ಹರಿದಾಡೋಕೆ। ಐವರು ಬಾಲರು ವಾನರರೇಕೆ?।।ಹಾಡುವ ನೆವದಲಿರೋಧನಮಾಡುವ। ಕೋಡೆಗ ದಂದದಕುವರಿವರ್‍ರೈವರು। ತಡೆ ಬಡೆ ಇಲ್ಲದೆ ಗುಡುಗುವ ಅಜ್ಜಿ। ಕಿದಿಕಿದಿ ಹಾರುವ ಗೂರಲು ಅಜ್ಜಿ। ಕೆಮ್ಮುತ ನರಳುವ ಮುದಿನಾಗತ್ತೆ। ಎನ್ನುತ ನಗೆವರು ನೆರೆಹೊರೆಜನಗಳು। ಗುಂಪಾಪ। ಸುಂದರ್‍ರಾಯನ ಸಂಸಾರ। ಭಾವನ ಮಾವನ ವಾರಗಿತ್ತಿ। ಮಡದಿಯಸೋದರ ಮಾವನಮೈದುನ। ಮನೆಯಲಿ ಮಾಡುವ ಬಲುಪುಂಡತನಾ। ದಿಕ್ಕೇ ಇಲ್ಲದ ದಾರೀ ತಪ್ಪಿದ ದೂರದ ನೆಂಟನ ಅಕ್ಕನ ಗಂಡ। ನಡೆಯುತ ಲೆಡೆವೋ ಗಡಿಬಿಡಿಗಂಡ। ಅನ್ನಕೆ ಬಿದ್ದಿಹ ದಾಂಡಿಗಭಂಡ। ಅಡಿಗೆ ಮನೆಗೊಂದಡುಗೂಲಜ್ಜಿ। ಉಗ್ರಾಣಕ್ಕೊಂದು ಉಂಡಾಡಿ ಭಟ್ಟ। ಕೊಟ್ಟಿಗೆ ತುಂಬಾ ಕರೆಯದ ಆಕಳು। ಕೆಲಸವಕೆಡಿಸಲು ನಾಲ್ಕೈದಾಳು। ಬೆಳ್ಳಂಬೆಳಕೊ ಬೆಕ್ಕಿನ ಕಾಟ। ಬಿಡದೇ ಬೊಗಳುವ ನಾಯಿಯವ್ಹಾಂತ್ರ। ರಾಯನಿಗೇತಕೆ ಹಿಡಿಯಿತು ಹುಚ್ಚು। ಸಂಸಾರವನಡೆಸಲು ಅರಿಯದ ಪೆಚ್ಚೂ। ರಾಯನ ಕಷ್ಟವ ತಿಳಿಯದ ಜನ ಹೇಳಲು ಹೊರಟರೆ ಅಪಾರ।।

**ಹಾಗಲಕಾಯ್ಗು ಮಾವಿನ ಹಣ್ಣಿಗು**

ಹಾಗಲಕಾಯ್ಗು ಮಾವಿನ ಹಣ್ಣಿಗು ಮದುವೆ ನಡ್ಡಿತ್ತು। ಛತ್ರದ ತುಂಬ ತರಕಾರಿ ಹಣ್ಣು ಗುಂಪು ತುಂಬಿತ್ತು।।ಪ।। ಬಾಳೆಹಣ್ಣು ಬಾಗಿ ಬಾಗಿ ಸ್ವಾಗತ ಹೇಳ್ತಿತ್ತು। ಡೊಳ್ಳುಹೊಟ್ಟೆ ಕುಂಬಳಕಾಯಿ ಡೋಳ ಬಾರ್‍ಸ್ತಿತ್ತು।।1।। ಸೋರೆಕಾಯಿ ಸೊಗಸಾಗಿ ವಾಲಗ ಊದ್ತಿತ್ತು। ತೆಂಗಿನಕಾಯಿ ಹೋಳ್ಗಳೆರಡು ತಾಳ ಹಾಕ್ತಿತ್ತು।।2।। ಪಿಳ್ಳುಜುಟ್ಟಿನ ಬದನೆಕಾಯಿ

ಮಂತ್ರ ಹೇಳ್ತಿತ್ತು। ಉರಿಮೂತಿ ಮೆಣಸಿನಕಾಯಿ ಹೋಮ ಮಾಡ್ತಿತ್ತು॥3॥ ಗಂಡು ಹೆಣ್ಣು ಹೊಗೆ ತಾಳ್ದಿ ಕಣ್ಣೀರು ಹಾಕ್ತಿತ್ತು। ಹೀರೆಕಾಯಿ ಹಿರಿ ಹಿರಿ ಹಿಗ್ಗಿ ನಕ್ಕು ನಲಿತಿತ್ತು॥4॥ ಬಾಳೆಕಾಯಿ ಬಾಗಿ ಬಾಗಿ ಎಲೆ ಹಾಕ್ತಿತ್ತು। ಹುರಳಿಕಾಯಿ ಊಟಕೆ ಏಳಿ ಎಂದು ಕೂಗ್ತಿತ್ತು॥5॥ ಸೌತೆಕಾಯಿ ಲೋಟಕ್ಕೆಲ್ಲ ನೀರು ಹಾಕ್ತಿತ್ತು। ಆಲೂಗೆಡ್ಡೆ ಹೊಟ್ಟೆತುಂಬ ಊಟ ಬಡ್ಸಿತ್ತು॥6॥ ಪಡವಲಕಾಯಿ ಬಳುಕ್ತಾ ಬಳುಕ್ತಾ ವೀಳ್ಯಕೊಡ್ತಿತ್ತು। ತೊಂಡೆಕಾಯಿ ತಾಂಬೂಲಕೊಟ್ಟು ಟಾ ಟಾ ಹೇಳ್ತಿತ್ತು॥7॥ ಅಂತು ಇಂತು ಕಹಿಗು ಸಿಹಿಗು ಮದ್ವೆಯಾಯಿತು। ಹಾಗಲಕಾಯಿ ಮಾವಿನಹಣ್ಣು ಜೋಡಿಯಾಯಿತು॥8॥

# ಶಿಶುಗೀತೆಗಳು

## ಕ್ರೀಡೆ

### ಅಚ್ಚಚ್ಚೊ ಬೆಲ್ಲದಚ್ಚೊ

ಅಚ್ಚಚ್ಚೊ ಬೆಲ್ಲದಚ್ಚೊ। ಅಲ್ಲಿ ನೋಡು ಇಲ್ಲಿ ನೋಡು। ಸಂಪಂಗಿ ಮರದಡಿ ಗುಂಪು ನೋಡು। ಯಾವ ಗುಂಪು ಕಾಗೆ ಗುಂಪು। ಯಾವ ಕಾಗೆ ಕಪ್ಪು ಕಾಗೆ। ಯಾವ ಕಪ್ಪು ಇದ್ದಿಲು ಕಪ್ಪು। ಯಾವ ಇದ್ದಿಲು ಸೌದೆ ಇದ್ದಿಲು। ಯಾವ ಸೌದೆ ಕಾಡು ಸೌದೆ । ಯಾವ ಕಾಡು ಸುಡುಗಾಡು। ಯಾವ ಸುಡು ರೊಟ್ಟಿ ಸುಡು। ಯಾವ ರೊಟ್ಟಿ ತಿನ್ನುವ ರೊಟ್ಟಿ। ತಿನ್ನು ರೊಟ್ಟಿ ತಿನ್ನು॥

### ಅಪ್ಪನು ತಂದ ಸೈಕಲ್ಲು — ರಾಗ:ಶಂಕರಾಭರಣ

ಅಪ್ಪನು ತಂದ ಸೈಕಲ್ಲು। ಮೂರು ಚಕ್ರದ ಸೈಕಲ್ಲು। ಅಂದದ ಚೆಂದದ ಸೈಕಲ್ಲು। ನಾನೇ ಇದಕೆ ಓನರು॥1॥ ಟ್ರಿನ್ ಟ್ರಿನ್ ಟ್ರಿನ್ ಬೆಲ್ಲು। ಪೋಂ ಪೋಂ ಹಾರನ್ನು। ಮೆತ್ತಗೆ ಇರುವ ಸೀಟು। ಬಣ್ಣದ ಬೆಡಗಿನ ಸೈಕಲ್ಲು॥2॥ ಗಾಳಿ ಇಲ್ಲದ ಟೈರು। ಬೇಕಿಲ್ಲ ಪೆಟ್ರೋಲು। ಬೇಡ ಇದಕೆ ಬ್ರೇಕು। ಹಾಗೇ ಓಡುವ ಸೈಕಲ್ಲು॥3॥ ಮನೆ ನೆಲವೆ ಇದಕೆ ರಸ್ತೆ। ಸಾಗೋದು ಸಲೀಸು। ಖುಷಿ ಕೊಡುವ ಸೈಕಲ್ಲು। ನನ್ನ ಮುದ್ದಿನ ಸೈಕಲ್ಲು॥4॥

### ಅವಲಕಿ ಪವಲಕಿ

ಅವಲಕಿ ಪವಲಕಿ ಕಾಂಚನ ಮಿಣಮಿಣ। ಡಾಂ ಢೂಂ ದಸ್ ಬುಸ್ ಕೊಂಯ್ ಕೊಠಾರ್॥

### ಅವರ್ ಬಿಟ್ಟು ಇವರ್ ಬಿಟ್ಟು

ಅವರ್ ಬಿಟ್ಟು ಇವರ್ ಬಿಟ್ಟು ಅವರ್ ಬಿಟ್, ಇವರ್ ಬಿಟ್ ಇವರ್ಯಾರು? ಎಂದು ಒಬ್ಬರು (ಮತ್ತೊಬ್ಬರ ಕಣ್ಣು ಮುಚ್ಚಿ ಸ್ನೇಹಿತರನ್ನು ಎದುರಿಗೆ ಸಾಲಾಗಿ ನಿಲ್ಲಿಸಿಕೇಳುವ ಆಟ)

### ಆನೆ ಅಳಗರ್ ಆನೆ (ತಮಿಳು)

ಆನೆ ಆನೆ ಅಳಗರ್ ಆನೆ। ಅಳಗರುಂ ಶೊಕ್ಕರುಂ ಏರುಂ ಆನೆ। ಶಿಂಗಾರ ತೋಟತ್ತೈ ಅಳಿಕ್ಯುಂ ಆನೆ। ಆನೆ ವಂದುದಾಂತೋಪ್ಪುಲೇ। ಅಳಿಯ ಪಳುತ್ತುದಾಂ ಮಾಂಬಳಂ। ಕುದುರೆ ವಂದುದಾಂ ತೋಪ್ಪುಲೆ ಕುಲುಂಗ ಪಳುತ್ತುದಾಂ ಕೊಯ್ಯಂಪಳುಂ॥

### ಏತೆತ್ತಾ ಬಲ್‌ಬಲಾ (ಕಾಲಿನ ಮೇಲೆ ನಿಲ್ಲಿಸಿ ಮೇಲೆ ಕೆಳಗೆ ಮಾಡುವುದು)